ಲಲಿತ ಸಾಹಿತ್ಯಮಾಲೆಯ ೪೯ನೆಯ ಕಂತು

ಹನ್ನೊಂದನೆಯ ವರ್ಷದ ಮೂರನೆಯ ಪ್ರಕಟನೆ

# ಕಾಡಿನ ಕರೆ

ಜಾಕ್ ಲಂಡನ್ ರಚಿತ ಕಾದಂಬರಿ

ಎಂಟು ಕಲಾಮಯ ಸಂದರ್ಭಚಿತ್ರಗಳೊಡನೆ

ಅನುವಾದ :

ಎನ್. ಎಸ್. ಗದಗಕರ ಬಿ. ಎ.



ಲಲಿತ ಸಾಹಿತ್ಯಮಾಲೆ, ಧಾರವಾಡ

ಆಗಸ್ಟ ೧೯೫೯

# KADINA KARE

( Kannada )

Translation of
## The Call of The Wild

*by*
Jack London



*Translated by*
N. S. Gadagkar, B. A.

*Illustrated by*
'Bapu'

First Edition-August 1959, 5000 Copies

PUBLISHED UNDER THE AUSPICES OF
THE SOUTHERN LANGUAGES BOOK TRUST

KANNADA — 24

Publisher :
**D. B. Kulkarni**
LALITA SAHITYA MALE, DHARWAR

Price : Rs. 1—40



*Printed by*
BASAVARAJ HORADI, LALITA MUDRANALAYA, DHARWAR

Cover and Illustrations :
Printed at Samyukta Karnatak Press, Hubli

# ನಿವೇದನೆ

ಲಲಿತ ಸಾಹಿತ್ಯಮಾಲೆಯ ಹನ್ನೊಂದನೆಯ ವರುಷದ ಮೂರನೆಯ ಪ್ರಕಟನೆ, ಈ ಕಾದಂಬರಿ. ಪ್ರಕಟನೆಗಳ ಮಧ್ಯಂತರದ ಅವಕಾಶ ಬಹು ದೀರ್ಘವಾಯಿತು. ಚಂದಾದಾರರು ಮನ್ನಿಸುವುದು. ಮುಂದೆ ಭಾರತೀಯ ವಿವಿಧ ಭಾಷೆಗಳ ಜಾನಪದ ಕಥೆಗಳ ಸಂಕಲನವೊಂದು, ಸ್ವತಂತ್ರ ಸಂಕಥನಗಳ ಗೊಂಚಲೊಂದು ಬಹು ಬೇಗ ಪ್ರಕಟವಾಗುತ್ತವೆಂಬುವನ್ನು ತಿಳಿಸ ಬಯಸಿದ್ದೇವೆ.

"ಕಾಡಿನ ಕರೆ" ವಿಶ್ವವಿಖ್ಯಾತ ಲೇಖಕನ ಬಹು ಪ್ರಖ್ಯಾತ ಕೃತಿ. ಜಾಕ್ ಲಂಡನ್ ತನ್ನ ಸಾಹಸಮಯ ಜೀವನದ ವೈಶಿಷ್ಟ್ಯಪೂರ್ಣ ಅನುಭವಗಳನ್ನು ಅತ್ಯಂತ ಕಲಾಮಯವಾಗಿ ಇಲ್ಲಿ ಚಿತ್ರಿಸಿ ತೋರಿಸಿದ್ದಾರೆ. ಒಂದು ನಾಯಿಯ ಒಡೆತನದ ಹಸ್ತಾಂತರಗಳ ಮೂಲಕ ಕಥೆ ಸಾಗುತ್ತದೆ. ನಾಯಿಗಳ ಜಾತಿವಿಶಿಷ್ಟವಾದ ಸ್ವಭಾವ-ಸಾಹಸಗಳು, ವಿವಿಧ ಸನ್ನಿವೇಶಗಳಲ್ಲಿ ಅವು ಬದುಕಬೇಕಾದ ರೀತಿ, ಮಾನವನೊಡನೆ ಅವುಗಳಿಗಿರುವ ಅನಿವಾರ್ಯವಾದ ನಿಕಟ ಸಾಹಚರ್ಯ, ಮಾನವನ ಸ್ವಾರ್ಥ,—ಅವನಲ್ಲಿಯ ಭೂತದಯೆಯನ್ನು, ಪ್ರೀತಿ-ವಿಶ್ವಾಸವನ್ನು ಗೆಲ್ಲುವ ನಿಜವಾದ ನಾಯಿತನ, ಮಾನವನ ಪ್ರೀತಿಗೆ ಸರಿದೊರೆಯಾಗಿ ಉಕ್ಕುವ ನಾಯಿಯ ಪ್ರೀತಿಪೂರ.... ತ್ಯಾಗಶೀಲ, ಕರುಣಾಮಯ, ಅನುಕಂಪನೀಯ ಶೀತಲ ಚಿತ್ರಗಳು ಹಲವನ್ನು ಇಲ್ಲಿ ಕಾಣುವಂತಿದೆ. ಇದು ಕನ್ನಡ ವಾಚಕರಿಗಂತೂ ತೀರ ವಿರಳವಾದ ಕೊಡುಗೆಯಾಗಿದೆ.

ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಈ ಪುಸ್ತಕವನ್ನು ಪ್ರಕಟಿಸುವುದು ಸಾಧ್ಯವಾಯಿತು. ಶ್ರೀ ಎಸ್. ಎಸ್. ಗದಗಕರರು ಮೂಲ ಕೃತಿಯನ್ನು ಅತ್ಯಂತ ತ್ವರಿತಗತಿಯಿಂದ ತೃಪ್ತಿಕರವಾಗಿ ಕನ್ನಡಿಸಿ ಕೊಟ್ಟಿದ್ದಾರೆ. ಲಲಿತ ಮುದ್ರಣಾಲಯದ ಮಿತ್ರರು ಕಾದಂಬರಿಯನ್ನೂ ಸಂಯುಕ್ತ ಕರ್ನಾಟಕ ಮುದ್ರಣಾಲಯದವರು ಚಿತ್ರಗಳನ್ನೂ ಸಮಯಾನುಸಾರ ಮುದ್ರಿಸಿ ಕೊಟ್ಟು ನೆರವಾಗಿದ್ದಾರೆ. ಇವರಿಗೆಲ್ಲ ಕೃತಜ್ಞತೆಯ ವಂದನೆಗಳು.

ಲಲಿತ ಸಾಹಿತ್ಯಮಾಲೆ<br>ಧಾರವಾಡ<br>೧೫—೮—೧೯೫೯

—ಸಂಪಾದಕ

# ಆಮುಖ

ಸಾಧಾರಣ ಜನತೆಗೆ ರುಚಿಸಲೂ ಬೇಕು, ನಿಜವಾಗಿ ಬೆಲೆ ಬಾಳುವಂಥದೂ ಆಗಬೇಕು, ಇಂಥ ಪುಸ್ತಕಗಳ ವಿಷಯದಲ್ಲಿ ತಮಗೆ ಈಗಾಗಲೇ ಆದ ಅನುಭವದಿಂದ ದಕ್ಷಿಣ ಭಾರತ ಪುಸ್ತಕ ಸಂಸ್ಥೆಯವರು ತಮ್ಮ ಎರಡನೆಯ ಪುಸ್ತಕ ಗುಚ್ಛವನ್ನು ದಕ್ಷಿಣದ ಎಲ್ಲಾ ಭಾಷೆಗಳಲ್ಲೂ ಪ್ರಕಟಿಸಲಿದ್ದಾರೆ. ಬಗೆ ಬಗೆಯ ಗುಂಪಿನ ಓದುಗರ ಭಿನ್ನ ಭಿನ್ನ ರುಚಿಗೆ ತಕ್ಕಂತೆ ಬಹಳ ಎಚ್ಚರಿಕೆಯಿಂದ ಪುಸ್ತಕಗಳನ್ನು ಆರಿಸಿದ್ದಾರೆ. ಸಹಜವಾಗಿಯೆ ಜೀವನದ ನಾನಾ ಮುಖಗಳ ಬಗ್ಗೆ ವಿಚಾರ ತಿಳಿಸುವ ಪುಸ್ತಕಗಳನ್ನು ಆರಿಸಿದ್ದಾರೆ. ಭಾರತದ ನಾಯಕಮಣಿಗಳ ಜೀವನವನ್ನು ತಿಳಿಸುವ ಗ್ರಂಥಗಳೂ ಇವೆ. ದೇಶದ ಹಿತಕ್ಕಾಗಿ, ಜನತೆಯ ಮೂಲಭೂತ ಹಕ್ಕುಗಳಿಗಾಗಿ, ದೇಶದ ಪ್ರತಿಷ್ಠೆ ಪ್ರಭಾವಗಳನ್ನು ಹೆಚ್ಚಿಸಲಿಕ್ಕಾಗಿ ಹೋರಾಡಿದ ಆ ನಾಯಕರಿಗೆ ತಾವು ಎಷ್ಟು ಋಣಿಗಳೋ ಮುಂದಿನ ಪೀಳಿಗೆಯವರು ತಿಳಿದುಕೊಳ್ಳುವುದು ಒಳ್ಳೆಯದು.

ಈ ಮಾಲೆಯಲ್ಲಿ ತತ್ತ್ವಶಾಸ್ತ್ರ, ಧರ್ಮ, ವಿಜ್ಞಾನ, ಪ್ರಾಚೀನೇತಿಹಾಸ, ಅರ್ಥಶಾಸ್ತ್ರಗಳೂ ಇವೆ. ಕಥಾ ಸಾಹಿತ್ಯಕ್ಕೆ, ಪ್ರಾಚೀನ ಕಲೆಗಳ ಪ್ರಚಾರಕ್ಕೆ ಎಡೆಯಿದೆ. ಅಭಿನಯ ಕಲೆ, ಶಿಲ್ಪಶಾಸ್ತ್ರ, ಪ್ರಾಚೀನ ಅವಶೇಷಗಳ ಸಂಶೋಧನೆ, ಎಲ್ಲ ಕಾಲಕ್ಕೂ ಅದ್ಭುತವೆನಿಸುವ ದಕ್ಷಿಣ ಭಾರತದ ಮಹಾ ದೇವಾಲಯಗಳ ವಿಷಯ, ಎಲ್ಲವೂ ಇವೆ. ಈ ಗೊಂಚಲು ಜನರಿಗೆ ಅಧ್ಯಯನಕ್ಕೆ ನಾನಾ ವಿಷಯಗಳನ್ನು ಒದಗಿಸಿ, ಇಂಥ ಗ್ರಂಥ ರಾಶಿಯನ್ನು ಹೆಚ್ಚು ಹೆಚ್ಚು ಜನ ಓದುವಂತೆ ಮಾಡುವುದರಲ್ಲಿ ಸಂದೇಹವಿಲ್ಲ.

ಈ ಕೆಲಸದಲ್ಲಿ ಒಂದು ಪ್ರಶಂಸನೀಯ ಅಂಶವಿದೆ—ದಕ್ಷಿಣ ಭಾರತದ ಭಾಷೆಗಳ ಪುಸ್ತಕಗಳನ್ನು ಒಂದರಿಂದ ಒಂದಕ್ಕೆ ಭಾಷಾಂತರ ಮಾಡಿಸುವ ಏರ್ಪಾಡು. ಈ ಗ್ರಂಥಮಾಲೆ ಪೂರ್ಣವಾದಾಗ ತಮ್ಮ ಜ್ಞಾನವನ್ನು ಬೆಳೆಸಿಕೊಳ್ಳಲು ನೈಜವಾದ ಅಭಿರುಚಿಯುಳ್ಳ ಅಕ್ಷರಸ್ಥರನೇಕರನ್ನು ಪಾಠಕ ಪ್ರಪಂಚಕ್ಕೆ ಇವು ಸೆಳೆಯುತ್ತವೆಂದು ನನಗೆ ನಂಬಿಗೆಯಿದೆ. ಅವರಿಗೆ ಜ್ಞಾನಬಲವನ್ನು ಹೆಚ್ಚಿಸಿಕೊಳ್ಳಲು ಅಮೂಲ್ಯ ಸಾಮಗ್ರಿಯನ್ನು ಒದಗಿಸುತ್ತದೆ. ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಕೆಲಸ, ಅದು ಪ್ರಾರಂಭವಾದ ಶ್ರೇಷ್ಠ ಉದ್ದೇಶಗಳನ್ನು ಹೆಚ್ಚು ಹೆಚ್ಚಾಗಿ ನಿರ್ವಹಿಸುತ್ತ ಬರುತ್ತದೆಯೆಂದು ಆಶಿಸುತ್ತೇನೆ.

ಮದರಾಸು

ಎ. ಲಕ್ಷ್ಮಣಸ್ವಾಮಿ ಮೊದಲಿಯಾರ್

ವೈಸ್‌ಛಾನ್ಸಲರ್

ಮದ್ರಾಸ್-ವಿಶ್ವವಿದ್ಯಾನಿಲಯ

# ಪೀಠಿಕೆ

ನಾಯಿಯೆಂದರೆ ಎಲ್ಲರಿಗೂ ಅಚ್ಚುಮೆಚ್ಚು. ಅದು ಬಹಳ ವಿಶ್ವಾಸಂಗ ಪ್ರಾಣಿಯಲ್ಲದೆ ಕಡುಮಮತೆಗೂ ಪಾತ್ರವಾದುದು.. ನಾಯಿಗಳಲ್ಲಿ ಅಸಂಖ್ಯಾತ ಹೆಸರಾದ ಜಾತಿಗಳಿವೆ. ಹಲವಂತೂ ತಮ್ಮ ಕುಶಾಗ್ರ ಬುದ್ಧಿಗಾಗಿ ವಿಖ್ಯಾತವೆನಿಸಿವೆ. ಇಂತಹ ವಿಶಿಷ್ಟ ಜಾತಿಯ ನಾಯಿಯದೊಂದು ಕತೆ ಇಲ್ಲಿದೆ. ಹೃದಯವಿದಾರಕವಲ್ಲದೆ ಉತ್ಸುಕತೆ ಕೆರಳಿಸುವ ಕತೆ ಇದು. ವೈಯ್ಯಕ್ತಿಕ ಅನುಭವವನ್ನಾಧರಿಸಿಯೇ ಜಾಕ್ ಲಂಡನ್ ಈ ಕತೆ ಹೆಣೆದಿದ್ದಾನೆ.

ಕಾನಡಾದ ವಾಯವ್ಯದ ತುದಿಯಲ್ಲಿ ಅಲಾಸ್ಕಾದ ಬಳಿ ಯುಕಾನ್ ಇದೆ. ಕ್ಲೊನ್‌ಡೈಕ ಜಿಲ್ಹೆ ಅಲಾಸ್ಕಾದ ಅಂಚಿನಲ್ಲಿ ಹರಡಿದೆ. ೧೮೯೬ ರ ಸುಮಾರಿಗೆ ಕ್ಲೊನ್‌ಡೈಕ ನದಿಗಳ ಪಾತ್ರಗಳಲ್ಲಿ ಬಂಗಾರದ ಪುಡಿ ಸಿಗುವದೆಂದು ಶೋಧವಾಯಿತು. ಈ ಸುವರ್ಣ ಶೋಧನೆಗಾಗಿ ಜಗತ್ತಿನ ಮೂಲೆ ಮೂಲೆಗಳಿಂದ ಜನರು ನುಗ್ಗತೊಡಗಿದರು. ಕೆಲವರಂತೂ ಕುಬೇರರಾದರು. ಬೇರೆ ಹಲವರು ಕೊರೆಯುವ ಚಳಿಯಲ್ಲಿ ಜೀವ ನೀಗಿದರು.

ಕ್ಲೊನ್‌ಡೈಕ ಜಿಲ್ಹೆಯಲ್ಲಿ ಉತ್ತರಧ್ರುವ ಪ್ರದೇಶದ ಹವಾಮಾನವಿದ್ದು ವರ್ಷದ ಏಳು ತಿಂಗಳಲ್ಲಿ ಅತಿ ಚಳಿ ಇರುವದು. ಪ್ರದೇಶವೆಲ್ಲ ಹಿಮಾಚ್ಛಾದಿತವಿರುವದು. ಮೇ ತಿಂಗಳ ಮಧ್ಯದಿಂದ ಮೊದಲಾಗಿ ಅಗಸ್ಟದ ಮೊದಲ ವಾರದ ವರೆಗೆ ಅಲ್ಲಿ ಒಂದೇ ಸವನೆ ಹಗಲು ಇರುವದು—ದಿನದ ಇಪ್ಪತ್ತು ನಾಲ್ಕು ತಾಸೂ ಕೂಡ ! ಮಧ್ಯ ರಾತ್ರಿಗೆ ಸಹ ಸೂರ್ಯನು ಕಾಣುವನು.

ಸುವರ್ಣಾನ್ವೇಷಣೆಯಲ್ಲಿ ಜಾಕ್ ಲಂಡನ್ ಅಲೆದಾಡಿದುದು ಈ ಪ್ರದೇಶದಲ್ಲಿಯೆ ! ಇಂತಹರಿನ್ನೆಷ್ಟು ಜನರಿದ್ದರೊ ಯಾರಿಗೆ ಗೊತ್ತು ? ಈ ಪರಿಸ್ಥಿತಿಯಲ್ಲಿದ್ದ ಜಾಕ್‌ನಿಗೆ ಇಂತಹ ರಂಜಕ ಕತೆ ಬರೆಯಲು ಸಾಧ್ಯವಾಯಿತು.

ಹಿಮಾಚ್ಛಾದಿತ ಪ್ರದೇಶಗಳಲ್ಲಿ ಪ್ರವಾಸಿಕರು ಬಂಡಿಗಳನ್ನೆಳೆಯಲು ನಾಯಿಗಳನ್ನೊ ರೆನ್‌ಡಿಯರ (ಒಂದು ಜಾತಿಯ ಜಿಂಕೆ)ಗಳನ್ನೊ ಉಪಯೋಗಿಸುವರು. ಬಂಡಿಗಳೊ—ವಿಶಿಷ್ಟ ಬಗೆಯವು. ಸ್ಲೆಜ್ ಎಂದು ಅವಕ್ಕೆ ಹೆಸರು.

ಬಂಗಾರದ ಆಸೆಯಿಂದ ಕ್ಲೊನ್‌ಡೈಕಿಗೆ ಹೋಗುವ ಜನ ಹೆಚ್ಚಾದುದಕ್ಕೆ ಇಲ್ಲಿಗೆ ಸಾಗಿಸುವ ವಸ್ತುಗಳೂ ಹೆಚ್ಚಿದುವು. ಓಲೆಗಳ ವಿತರಣೆಗೋಸುಗ ಕೆನಡಾ ಸರಕಾರವು ಅನುಕೂಲತೆಯನ್ನೊದಗಿಸಿತು. ಹೀಗೆ ಅಂಚೆಯ ವ್ಯವಸ್ಥೆಗಾಗಿ, ಸುವರ್ಣಾರ್ಥಿ ಜನರನ್ನೊಯ್ಯುವದಕ್ಕಾಗಿ ಅಸಂಖ್ಯಾತ ನಾಯಿಗಳ ಆವಶ್ಯಕತೆ ಎನಿಸುತ್ತಿತ್ತು. ತನ್ಮೂಲಕ ನಾಯಿಗಳ ವ್ಯಾಪಾರಕ್ಕೂ ಕಳೆ ಕಟ್ಟಿತು. ನಾಯಿಗಳನ್ನು ಕದ್ದು ಮಾರುವದು ಎಷ್ಟೊ ಜನರಿಗೆ ಉದರ ನಿರ್ವಾಹಮಾರ್ಗವಾಗಿ ಪರಿಣಮಿಸಿತು. ಈ ಕಥೆಯ ಕಥಾನಾಯಕ ಇಂತಹದೊಂದು ಅಪಹೃತ ನಾಯಿ...ಉತ್ತರ ಧ್ರುವ ಪ್ರದೇಶಕ್ಕೆ ಬಂದಿತ್ತು.

ಕಥಾ ನಿರೂಪಣೆಯ ಕಲೆಯಲ್ಲಿ ಜಾಕ್ ಲಂಡನ್‌ನದು ಸಿದ್ಧ ಹಸ್ತ. ಬಕ್‌ನ ಕತೆ ಅವನ ಕೃತಿಗಳಲ್ಲೆಲ್ಲ ಮೇರುಮಣಿ. ಮೂಲದಲ್ಲಿಯೂ ಲಕ್ಷಾಂತರ ಜನರು ಈ ಕತೆ ಓದಿ ಆನಂದಪಟ್ಟಿದ್ದಾರೆ. ಯುರೋಪದ ಬಹುತರ ಎಲ್ಲ ಭಾಷೆಗಳಲ್ಲೆಲ್ಲ ಇದು ಅನುವಾದಿತವಾಗಿದೆ. ನಮ್ಮ ಜನರೂ ಇಂತಹದೊಂದು ಸುರಮ್ಯ ಕತೆ ಓದಿ ಹರ್ಷಿಸಲೆಂಬ ಹಂಬಲದಿಂದ ಇಲ್ಲಿಯ ಭಾಷೆಗಳಲ್ಲಿ ಇದು ಅನುವಾದಿಸಲಾಗುತ್ತಿದೆ. ಈ ಕತೆಯನ್ನು ಓದಿ ಸುಖಿಸಿದವರು ಜಾಕ್‌ನ ಇನ್ನಿತರ ಕಲಾಕೃತಿಗಳನ್ನು ಓದಿಯೇ ತೀರುವರೆಂಬಲ್ಲಿ ಸಂದೇಹದ ಲವಲೇಶವಿಲ್ಲ.

ಮದ್ರಾಸ — ಎಂ. ಪಿ. ಥೂರನ್

# ವಿವರ





**ಚಿತ್ರಗಳ ಪರಿವಿಡಿ**

# ಪ್ರಸ್ತಾವನೆ

ಜಾಕ್ ಲಂಡನ್ ಈತನ ಜೀವನ, ಕಲಾಕೃತಿ ಹಾಗೂ ಸ್ವಭಾವದ ಗುಟ್ಟೆಂದರೆ ಅದ್ಭುತರಮ್ಯ ಸಂದರ್ಭಗಳು; ಮತ್ತು ಅದರಲ್ಲಿ ಅವನ ಅಲೌಕಿಕ ಪ್ರೇಮ. ಜೀವನದಲ್ಲಿಯ ಅವನ ದುಂದುಗಾರಿಕೆಯ ಪ್ರವೃತ್ತಿ, ಅಪ್ರಾಯೋಗಿಕ ಸಾಮಾಜಿಕ ಸಿದ್ಧಾಂತಗಳು, ಕೀರ್ತಿ ಹಾಗೂ ಹಣಕ್ಕಾಗಿ ಅವನ ಆಕಾಂಕ್ಷೆ, ಬರವಣಿಗೆಯ ವಿಶಿಷ್ಟ ರೀತಿ— ಎಲ್ಲವೂ ಅದ್ಭುತತೆಯ ಕಲ್ಪನೆಯಲ್ಲಿ ಉಗಮ ಹೊಂದಿ ಅವನ ಜೀವನಕ್ಕೆ ಅಪೂರ್ವ ಕಾಂತಿಯನ್ನುಂಟುಮಾಡಿವೆ.

ಜಾಕ್ ಲಂಡನ್ ಸ್ಯಾನ್ ಫ್ರಾನ್ಸಿಸ್ಕೋದಲ್ಲಿ, ೧೮೭೬ರ ಜನವರಿ ೧೨ನೆಯ ದಿನಾಂಕ ಹುಟ್ಟಿದನು. ತಾಯಿ ತಂದೆಗಳು ಮಧ್ಯ ಪಶ್ಚಿಮದಿಂದ ಕ್ಯಾಲಿ-ಫೋರ್ನಿಯಕ್ಕೆ ಬಂದಿದ್ದರು. ತಂದೆ ಯಾದವೀಯುದ್ಧದ ಪುರಸ್ಕರ್ತರೆನಿ-ಸಿದ್ದರು. ಆ ಕಲಹದಿಂದುಂಟಾದ ಗಾಯಗಳು ಇನ್ನೂ ಮಾಯ್ದಿರಲಿಲ್ಲ. ತಂದೆ, ಬಹಳ ಕಷ್ಟಕ್ಕೀಡಾದ ಮುದುಕನೆಂಬದು ಮಾತ್ರ ಜಾಕ್‌ನಿಗೆ ಗೊತ್ತು. ಹುಟ್ಟಿದಾಗಿನ ಹೆಸರು ಜಾನ್ ಗ್ರಿಫಿಥ್ ಲಂಡನ್ ಎಂದಿದ್ದರೂ ಜಾಕ್ ಎಂದೇ ಅವನು ಹೆಸರುವಾಸಿಯಾದನು. ಅಟ್ಲಾಂಟಿಕ್ ಮಾಸಪತ್ರಿಕೆ ಸಹಿತ ಈ ಹೆಸರು ಬದಲಿಸಲು ಮನಸ್ಸು ಮಾಡಲಿಲ್ಲ. ತನ್ನ ಬಾಲ್ಯಾವಸ್ಥೆಯ ಕಠಿಣ ಪರಿಸ್ಥಿತಿಯನ್ನು ಬಹುಶಃ ಅವನು ಅತಿರಂಜಕವಾಗಿ ಮಾಡಿರಬೇಕು. ಲೇಖ-ಕನು ಅಷ್ಟಕ್ಕೆ ಕ್ಷಮ್ಯನೇ ಅಹುದು. ಅದ್ಭುತತೆಯ ಮೇಲೆ ಪ್ರೇಮವಿದ್ದ ಜಾಕ್ ಇಷ್ಟು ಮಾಡಲಾರನೆ? ಆದರೆ ತಿನ್ನಲು ಅವನಿಗೆ ಪೌಷ್ಟಿಕ ಆಹಾರ ಮಾತ್ರ ದೊರೆಯುತ್ತಿತ್ತು. ಗ್ರಾಮರ್ ಸ್ಕೂಲಿನಲ್ಲಿ ಶಿಕ್ಷಣ ಸಾಗಿದಾಗ ಈ ಬಡತನವೇನೂ ಅಡ್ಡಬರಲಿಲ್ಲ. ತಂದೆ ತಾಯಿಗಳು ತೋಟ-ಪಟ್ಟಿ ಕೆಲಸ ಮಾಡಿಕೊಂಡಿದ್ದು ಮುಂದೆ ಕೈ ನಡೆಯದ್ದಕ್ಕೆ ಎಲ್ಲ ಭೂಮಿಯನ್ನು ಮಾರಿ ಓಕ್ಲಂಡಿಗೆ ಹೋಗಬೇಕಾಯಿತು.

ಲಂಡನ್ನನ ಮನೆಯಲ್ಲಿ ಅಂತಹ ದೌಲತ್ತಿರದಿದ್ದರೂ ಹುಡುಗನ ಓದು ಬರೆಹಕ್ಕೇನೂ ಅಡೆತಡೆಯಾಗಲಿಲ್ಲ. ವಿವಿಧ ಬಗೆಯಾಗಿ ಆಶಾಮಂದಿರಗಳನ್ನು

ನಿರ್ಮಿಸಿಕೊಂಡನು. ಎಂಟನೆಯ ವಯಸ್ಸಿನಿಂದ ಅವನಿಗೆ ರೋಮಾಂಚಕಾರಿ ಕತೆಗಳಿಂದಲೆ ವಾಸ್ತವ ಜೀವನವಷ್ಟೆ ಮೆಚ್ಚಿನದೆನಿಸಿತು. ಅಂತಹ ಓದೇ ಸಾಗಿತು. ಸಣ್ಣವನಿರುವಾಗಲೆ ಔಯಿಡಾಸ 'ಸಿಗ್ನಾ' ಪುಸ್ತಕ ದೊರೆಯಿತು. ತುಂಬ ರಂಗುರಂಗಾದ ಚಿತ್ರಗಳು. ಇಟಲಿಯ ಒಬ್ಬ ಒಕ್ಕಲು ಬಾಲಕನ ಕತೆಯದು. ಅವನ ಯಶಸ್ವಿ ಬಾಳಿನ ರಸಮಯ ಕತೆಯದು. ಪುಸ್ತಕದ ಕೊನೆಯ ಹಲವು ಪುಟ ಗಾಳು ಆಗಿದ್ದರೂ ತನ್ನ ಅಕ್ಕನ ಸಹಾಯದಿಂದ ಕತೆ ಓದಿಸಿ ಅದರ ಸ್ವಾರಸ್ಯ ಸವಿದ. ಸ್ವತಃ ಓದಿ ತಿಳಿದುಕೊಂಡ. ಈ ಗ್ರಂಥವೇ ಮುಂದೆ ಅವನ ಜೀವನಕ್ಕೆ ಸ್ಫೂರ್ತಿ ತಂದಿತೆಂದು ಅವನೇ ಹೇಳಿಕೊಂಡಿದ್ದಾನೆ. ಕ್ಷಿಪ್ರದಲ್ಲಿಯೇ ಡ್ಯು ಚ್ವಿಲ್ಲೂನ ಸಾಹಸದ ಕತೆಗಳು ಅವನ ಮನಸ್ಸನ್ನು ಹಿಡಿದವು. ಆ ಮೇಲೆ ಕೆಲವು ಕಾದಂಬರಿಗಳನ್ನೋದಿದನು—ಕಡತಂದಿದ್ದುವು! ಅಂಗಡಿ ಇಟ್ಟ ಬಡ ಒಳ್ಳೆ ಹುಡಿಗೆಯರ ವಿಷಯಕವಾದ ಲೇಖಾಂಕಗಳನ್ನೋ-ದಿದನು. ಜಾಕ್ ಲಂಡನ್ನನು ಅಯಶಸ್ವಿಯಾದ ಒಕ್ಕಲುತನ ಬಿಟ್ಟುಕೊಟ್ಟು ಓಕ್‌ಲಂಡಿಗೆ ಬಂದಾಗ, ಜಾಕ್‌ನಿಗೆ ಸಾರ್ವಜನಿಕ ವಾಚನಾಲಯಗಳೇ ಗತಿಯಾದವು. ಹುಡುಗನಿಗೆ ಆಗ ಹತ್ತು ವರುಷ. ಸ್ಮಾಲೆಟ್ಟ, ವಿಲ್ಕಿ, ಕಾಲಿನ್ಸರ ಕೃತಿಗಳನ್ನು ಒಂದರ ಹಿಂದೆ ಒಂದರಂತೆ ಆಶೆಯಿಂದ ಓದಿದನು. ಭೂಶೋಧಕರ, ಸಮುದ್ರ ಪರ್ಯಟನಗಾರರ ವೃತ್ತಾಂತಗಳೂ ಅವನಿಗೆ ಆತಿಯಾಗಿ ರುಚಿಸಿದವು. ಮುಂದೆ ಒಂದು ವರ್ಷದಲ್ಲಿ ಸಾಹಿತ್ಯರಂಗದಲ್ಲಿ ರಡಿ-ಯಾರ್ಡ್ ಕಿಪ್ಲಿಂಗ ಬಂದೊಡನೆ, ಜಾಕ್ ಅವನ ಬಗ್ಗೆ ಬಹಳ ಉತ್ಸುಕತೆ ತಳೆದ. ಅದೇ ಅವನ ಜೀವನಮಾನದಲ್ಲಿ ಅಮೌಲ್ಯ ಸೊತ್ತಾಗಿ ಪರಿಣಮಿಸಿತು.

ಆದರೆ ಹುಡುಗ—ಜಾಕ್—ಪುಸ್ತಕಹುಳುವಾಗಲಿಲ್ಲ. ಸಣ್ಣ ಪುಟ್ಟ ಕೈ ಕೆಲಸ ಮಾಡಿ ಕಾಲ ಕಳೆಯುತ್ತಿದ್ದನು. ಶಾಲಾ ಶಿಕ್ಷಣ ಮುಗಿದೊಡನೆ ಕೆಲ ಕಾಲ ಸಮುದ್ರಯಾನ ಮಾಡಿದ. ಬಹುದೂರ ಯಾತ್ರೆ ಕೈಕೊಳ್ಳದಿದ್ದರೂ, ನಾವಿನಲ್ಲಿ ಪ್ರವಾಸಗೈಯ್ಯುತ್ತಿದ್ದ, ಓಪಿಯಮ್ ಕಳ್ಳಸಾಗಾಟ ನಡಿಸುತ್ತಿದ್ದ, ಹದಿನಾಲ್ಕು ವರ್ಷದ ಬಾಲಕನೊಬ್ಬನ ಪರಿಚಯವಾಯಿತು. ಬಾಲಕನ (ಜಾಕ್‌ನ) ಕಲ್ಪಕತೆಗೆ ಆಗ ಕವಲೊಡೆಯಿತು. ಆದರೆ ಮುಂದೆ ಕೆಲಸಕ್ಕೆ ಕೆಲವು ತಿಂಗಳು ಮಾತ್ರ ಹೋದನು. ಯಂತ್ರದ ಹೊರೆ ಅವನಿಗೆ ಸರಿ ಕಾಣ ಲಿಲ್ಲ! ಇಲ್ಲಿಯ ಯಾಂತ್ರಿಕ ಜೀವನದಲ್ಲಿ ರೋಮಾಂಚಕತೆಗೆ ಎಡೆ ಎಲ್ಲಿ?

ಅವನ ಮಹತ್ವಾಕಾಂಕ್ಷೆಗೂ ಪ್ರೋತ್ಸಾಹವಿಲ್ಲ. ಸಾಹಸದ ಲವಲೇಶವಿಲ್ಲ. ಇಂತು ಜಾಕ್ ಕಾರಖಾನೆಗೆ ಶರಣು ಹೊಡೆದ! ಮತ್ತೆ ಸಮುದ್ರದ ಕಡೆಗೆ ಮನಸ್ಸು ಹರಿಯಿತು. ತನ್ನ ದಾಯಿಯ ಕಡೆಯಿಂದ ಮೂರು ನೂರು ಡಾಲರ್ ತೆಗೆದುಕೊಂಡ. ಸ್ಯಾನ್‌ಫ್ರಾನ್ಸಿಸ್ಕೋದ ಉಪಸಾಗರದಲ್ಲಿ ಕಪ್ಪೆಚಿಪ್ಪು ಕೂಡಿಸ ತೊಡಗಿದ. ಹದಿನಾರು ವರುಷದವನಾದಾಗ ಸ್ವಾವಲಂಬಿಯಾಗಲು ಹವಣಿಸಿದ. ನಾವಿಕರು, ಸಲೂನಿನ ಒಡೆಯರು ಅವನ ಸಹಚರಿಗಳಾದರು. ಅವರ ಹೆಸರುಗಳೂ ಮೋಹಕ. ಸಮುದ್ರ ಜೀವನದ ಸಾಹಸಕ್ಕೆ ಬೇಸತ್ತು ಕೊನೆಗೆ ದಿಸೆ ಬದಲಿಸಿದ. ಮೀನುಗಳ ರಕ್ಷಣೆಯ ಕಾರ್ಯದಲ್ಲಿ ತನ್ನ ಹೆಸರು ಹಚ್ಚಿಸಿದ. ಸಲ್ಲದ ಕೆಲಸಕ್ಕೆ ಕೈಹಾಕಿದವರ ಸಾಹಸೀ ಚಟುವಟಿಕೆಗಳಲ್ಲಿ ಮನಸ್ಸು ಹಾಕಿದ. ಜೀವನದ ಬಹುಮುಖಗಳ ಸಂಪರ್ಕವಿರಬೇಕೆಂದು ಅವನ ಮನೀಷೆ. ಕುಡಿತದ ಚಟ ಅಂಟಿಕೊಂಡಿದ್ದರ ಪರಿಣಾಮವಾಗಿ ಜಾಕ್‌ನ ಆರೋಗ್ಯವೇ ಕೆಟ್ಟಿತು. ಮನಸಾ ಇದೆಲ್ಲ ಹಾರೈಸಿದ್ದಲ್ಲ. ತನ್ನ ಹದಿನೇಳನೆಯ ವರುಷ ಅವನು ನಾವೆ ನಡೆಸುವವನ್ನು ಕೈಕೊಂಡು ಜಪಾನಿನೆಡೆಗೆ ಹೊರಟ.

ಈ ಅತ್ಯಂತ ಪರಿಣಾಮಕಾರಿ ಜಲಪರ್ಯಟನವು ಅವನಿಗೆ ನಿಜಕ್ಕೂ ಹಿತಕಾರಿಯಾಗಿ ಪರಿಣಮಿಸಿತು. ನಿಸರ್ಗದ ಮಡಲಿನಲ್ಲಿ, ಪ್ರದೀರ್ಘವಾದ ಹಗಲುಗಳೆಲ್ಲ ಅವನ ಮೈಮುರಿ ದುಡಿತಕ್ಕೆ ಮೀಸಲಾದವು. ಬಂದರದಲ್ಲಿರು-ವಾಗ ಎಷ್ಟೋ ವಾರಗಳ ವರೆಗೆ ಲಂಪಟವೃತ್ತಿ ಅವನನ್ನು ತೊರೆದಿರಲಿಲ್ಲ. ಓಕ್ಲಂಡಿಗೆ ಮರಳಿ ಬಂದಾಗ, ಎಲ್ಲಿಯಾದರೂ ಕೆಲಸ ಹಿಡಿಯಲು ಮನೆಯ ವರೆಲ್ಲ ಮನ ಒಲಿಸಲೆತ್ನಿಸಿದರು. ನಿಯಮಿತ ನೌಕರಿಯಾಗುವದೆಂದು ತಿಳಿದು ಕೊನೆಗೆ ಜಾಕ್ ನಾರಿನ ಕಾರಖಾನೆಯೊಂದಕ್ಕೆ ಹೋದ. ಹಿಂದಿನ ಕೆಲಸ-ಕ್ಕಿಂತ ಇದೇನೂ ಮೇಲ್ಮಟ್ಟದ್ದಾಗಿರಲಿಲ್ಲ. ಬೀದಿಯ ಗಾಡಿಗೆ, ಸಲಿಕೆ ಸಲಿಕೆ ಯಿಂದ ಕಲ್ಲಿದ್ದಲಿ ಕೂಡಿಸಿ ಪೂರೈಸುವ ಹೊರೆಯಂತೂ ಅವನಿಗೆ ಎಷ್ಟೂ ಮನಸಿಗೆ ಬರಲಿಲ್ಲ. ಕರ್ತವ್ಯಬುದ್ಧಿಯ ಬಗೆಗೇ ವಿದ್ವೇಷ ಉಂಟಾಗುವಂತಾ ಯಿತು. ವಿದ್ಯುತ್ ಶಾಖೆಯಲ್ಲಿ ಎಂಜಿನಿಯರನಾಗಬೇಕೆಂಬ ಉತ್ಕಟಾ-ಕಾಂಕ್ಷೆಗೆ ಇದು ಉಚಿತ ಹಿನ್ನೆಲೆ ಏನೊ! ಕಂಡವರಾರು? ಈ ೧೮೯೪ ರಲ್ಲಿಯೆ ಕೆಲಿಯ ಔದ್ಯೋಗಿಕ ದಳ ದೇಶದಾದ್ಯಂತ ತನ್ನ ಐತಿಹಾಸಿಕ ಕೂಚನ್ನು ಪ್ರಾರಂಭಿಸಿರಲಿಲ್ಲವೆ? ನಿರುದ್ಯೋಗಿಗಳಾದವರ ದಳದ ಮುಂದಾ

ಳಾದ ಚಾರ್ಲ್ಸ್ ಟಿ. ಕೆಲಿ ನಡೆಸಿದ ಅಸಂಖ್ಯಾತ ಕೂಚುಗಳಲ್ಲಿ ಇದೊಂದು ಮುಂದೆ ಇದೆ ಬೃಹದ್ರೂಪ ತಾಳಿ ನಗರ ನಗರಕ್ಕೆ ಹರಡಿ, ನೇತಾಜಿ ಕಾಕ್ಸಿಯು ಪ್ರದರ್ಶನಗಳಿಗೆ ಕಾರಣೀಭೂತವಾಯ್ತು. ಓಹಿಯೋದಲ್ಲಿ ಈ ಪರಂಪರೆಗೆ ಮೊದಲಾಯಿತು. ಸ್ಯಾನ್ ಫ್ರಾನ್ಸಿಸ್ಕೋದಿಂದ ಕೆಲಿಯು ದಳ ಸಾಗಿತು. ಅದರಲ್ಲಿ ೬೦೦ ಜನರು. ಪ್ರಾರಂಭಕ್ಕೆ ಅಲ್ಲಿಯ ನಗರಾಧ್ಯಕ್ಷ ದಾರಿಯ ಸಹಾಯ ಧನ ಸಲ್ಲಿಸಿ ಅವರ ಹೊಣೆಗಾರಿಕೆ, ಯತ್ನಗಳಿಗೆ ಸಹಾನುಭೂತಿ ತೋರಿಸಿದ. ಓಕ್‌ಲಂಡ ಸಹ ತನ್ನ ಕರ್ತವ್ಯ ಬುದ್ಧಿ ಮುಂದುಮಾಡಿತು— ದಿನೇ ದಿನೇ ಹೆಚ್ಚುತ್ತಿರುವ ಯುವದಳದ ಸಂಖ್ಯೆ ಒಮ್ಮೆ ಕಡಿಮೆಯಾಗಿ, ಇವರ ಕಾಟ ಹಿಂಗಿದರೆ ಸಾಕೆಂಬ ಚಿಂತೆ ಹಲವು ಜನರಿಗೆ ಒಳಗೊಳಗೆ ಇದ್ದಿತು. ತಮ್ಮ ನಗರ ಬಿಟ್ಟು ಮುಂದೆ ಈ ದಳ ಸಾಗಿದರೆ ಎಷ್ಟೋ ವಾಸಿ ಯೆಂದು ಹಲವಾರು ಜನ ಹಾರೈಸಿದ್ದರು. ಸೆಕ್ರೆಮೆಂಟಿಗೆ ದಾರಿ ದೊರೆಯಿತು. ದಳ ಮುನ್ನಡೆ ಇಟ್ಟಿತು. ಲೋಕಕಲ್ಯಾಣದ ಧ್ಯೇಯವಿರಿಸಿಕೊಂಡ ಜನ- ಸಾಮಾನ್ಯರ ಆ ತಂಡ ರಾಜಬೀದಿಯಲ್ಲಿಯೇ ನಡೆದಿತ್ತು. ಗಡಿನಾಡುಗಳಿಗೆ ತೊಂದರೆಯೇನೋ ಇದ್ದಿತು. ಆದರೆ ಉದಾತ್ತ ಧ್ಯೇಯಕ್ಕೆ ಮನಸೋತ ಜನತೆ ಸಹಕಾರ ನೀಡಲು ಹಿಂದು ಮುಂದು ನೋಡಲಿಲ್ಲ. ಓಕ್‌ಲಂಡಿನ ಲ್ಲಿಯೇ ಜಾಕ್‌ನಿಗೂ ಈ ಉತ್ಸಾಹಿ, ಕ್ರಾಂತಿಕಾರಿ ದಳಕ್ಕೂ ದುರ್ದೈವದಿಂದ ತಪ್ಪುಗಂಟಾಯಿತು. ಮಾಡುವದೇನು ? ಆದರೂ 'ಪ್ರಥಮಗ್ರಾಸೇ ಮಕ್ಷಿಕಾ ಪಾತಃ' ಎಂಬಂತೆ ಅಶುಭವೆನಿಸಿಕೊಳ್ಳದೆ ದಳವನ್ನು ಹಿಂಬಾಲಿಸಿದ. ಪೂರ್ವಕ್ಕೆ ಹೊರಟ ಎಕ್ಸಪ್ರೆಸ್ ಗಾಡಿಗೆ ಹಚ್ಚಿದ, ಸಾಮಾನು ಹೇರಿದ ಕೋಚಿನಲ್ಲಿ ಕುಳಿತು ಒಮಹಾದ ಬಳಿಯಲ್ಲಿ ಆ ದಳ ಸೇರಿಕೊಂಡ. ಮೈ ನುಗ್ಗುನುಗ್ಗಾ ಗಿತ್ತು. ಎತ್ತಿನ ಬಂಡಿಯ ಪ್ರವಾಸಕ್ಕೂ ಕನಿಷ್ಟ ತರಗತಿಯ ಪ್ರವಾಸವದು. ಇರಲಿ. ಜಾಕ್‌ನು ಹಾಹಾ ಎನ್ನುವಷ್ಟರಲ್ಲಿ ದಳದ ಸೈನಿಕರ ರೀತಿಗಳನ್ನೆಲ್ಲ ಅಳವಡಿಸಿಕೊಂಡನು. ಹಳ್ಳಿಯ ಮುಗ್ಧ ಹೆಣ್ಣುಮಕ್ಕಳಿಗೆ, ಬಾಯಿ ತೆಗೆದು ಕೊಂಡು ನಿಂತ ಬಾಲಕ-ಬಾಲಿಕಿಯರಿಗೆ ರುಚಿಕಟ್ಟಾದ ಕತೆ ಹೇಳಿ ತನ್ನ ಊಟದ ವೈಭವಶಾಲಿ ಏರ್ಪಾಡು ಮಾಡಿಕೊಂಡದ್ದು ನಿಜಕ್ಕೂ ಅವನ ಜೀವನದಲ್ಲಿ ಸಂಸ್ಮರಣೀಯ ಸನ್ನಿವೇಶ. ಕಥನ ಕಲೆ ತನಗೆ ಹೇಗೆ ಅಕಸ್ಮಾತ್ತಾಗಿ ಸಾಧಿಸಿತೊ ಎಂದು ಒಳಗೊಳಗೇ ಅವನಿಗೆ ಅಚ್ಚರಿ ಎನಿಸುತ್ತಿತ್ತು. ಒಮೆ-

ಹಾಕ್ಕೆ ತಲುಪಿದಾಗ ದಳದ ಚಟುವಟಿಕೆಗಳಿಗೆ ಕಳೆಕಟ್ಟಿತ್ತು. ಆದರೆ ಇಓ-ವಾಕ್ಕೆ ಬರುವಷ್ಟರಲ್ಲಿ, ವಾಸಿಂಗ್‌ಟನ್ನಿನಲ್ಲಿ ಕಾಕ್ಸಿ ನಿರಾಸೆಗೀಡಾದದ್ದು ತಿಳಿಯಿತು. ಅಂದಿನಿಂದ ಹಿಂದಿನ ಶಿಸ್ತು ಕನಸಾಯಿತು. ಇಂತಹದೊಡನೆಯೇ ಜಾಕ್ ಉನ್ಮಾದದಿಂದ ಮುಂದುವರಿದ. ಮುಂದೆ ಜಲಪರ್ಯಟನಕ್ಕೆ ಮನಸೋತ ದಳವಿದೆಂದು ಜಾಕ್‌ನಿಗೆ ನಿಶ್ಚಿತವಾಗಿ ಮನವರಿಕೆಯಾದೊಡನೆ, ಅವರ ಚಟುವಟಿಕೆ, ಸಿದ್ಧಿಯ ವಿಷಯಕ್ಕೆ ನಿರುತ್ಸಾಹ ಉಂಟಾದುದು ಸಹಜ. ಅಷ್ಟರಲ್ಲಿ ಕೆಲಿಗೂ ಈ ಅನುಯಾಯಿಗಳನ್ನು ಹಿಡಿಯುವದು ದುಸ್ತರವೆಂದು ಕಂಡು ಬಂದಿತು. ಜೀವನದ ಅದ್ಭುತತೆ, ರೋಮಾಂಚಕತೆ ಇಲ್ಲಿ ಸಿಗುವದೆಂದು ಹಾರೈಸಿದ್ದ ಜಾಕ್‌ನಿಗೆ ಇವರ ರಾಜಕೀಯ ಧೋರಣೆ, ಅಸ್ತವ್ಯಸ್ತತೆ ಎಷ್ಟು ಮಾತ್ರಕ್ಕೂ ಹಿಡಿಸಲಿಲ್ಲ. ಇನ್ನು ಈ ಸಾಹಸ ಸಾಕು ಎಂದು ಕೈ ಜೋಡಿಸಿ ತನ್ನ ಮಟ್ಟಿಗೆ ತಾನು ಸ್ವತಂತ್ರನಿರುವದೇ ಯೋಗ್ಯವೆಂದು ಮನಗಂಡ ಜಾಕ್. ಹ್ಯಾನಿಬಲ್ಲಿನಲ್ಲಿ ಕೊನೆಗೆ ದಳದ ನಿರೂಪ ತೆಗೆದುಕೊಂಡ. ಮಧ್ಯಪೂರ್ವ-ಪಶ್ಚಿಮದ ನಗರಗಳನ್ನೆಲ್ಲ ಸಂದರ್ಶಿಸಬೇಕೆಂಬ ಲವಲವಿಕೆ ಹುಟ್ಟಿ ಅವನು ಆ ದಾರಿ ಹಿಡಿದ. ಅಷ್ಟರಲ್ಲಿ ಕೆಲಿಯ ಲೋಕಕಲ್ಯಾಣಿ ದಳ ಸೊರಗುತ್ತ ಸಾಗಿತ್ತು. ಮೊದಲಿನ ಸಹಸ್ರಾರು ಜನರೆಲ್ಲಿ? ಕೈ ಬೆರಳಿನಲ್ಲೆ ಣಿಸಬಹುದಾದ ಈಗಿನ ಮಂಡಳಿ ಎಲ್ಲಿ? ಅಜಗಜಾಂತರ! ಇವರೇ ಮುಂದೆ ಇಓವಾ ನದಿ ದಾಟಿ ಎರಡು ತಿಂಗಳ ನಂತರ ವಾಶಿಂಗ್‌ಟನ್ನಿಗೆ ಬಂದು ತಲುಪಿದರಂತೆ!

ಲಂಡನ್ನನ ಸಂಚಾರೀ ಜೀವನದಲ್ಲಿ ಒಮ್ಮೆ ಅವನಿಗೆ ಸೆರೆಮನೆಯ ವಾಸ ಬಂದಿತು. ನಿಜಕ್ಕೂ ಅವನು ಇದಕ್ಕೆ ಅನರ್ಹನಿದ್ದರೂ ಆ ಜೀವನದಿಂದ ಅವನಿಗೆ ಸಾಮಾಜಿಕ ಪ್ರಜ್ಞೆಯುಂಟಾಯಿತು. ಇಂದಿನ ಜೀವನದ ರೀತಿಯಿಂದ ಏನೂ ಸಾಧಿಸುವಂತಿಲ್ಲ ಎಂದು ಮಾತ್ರ ಹೊಳೆಯಿತು. ಮನೆಗೆ ಬಂದ ಮೇಲೆ ತನ್ನ ಸಹೋದರಿಯಿಂದ ಹಣ ತೆಗೆದುಕೊಂಡು ಹೈಸ್ಕೂಲ ಶಿಕ್ಷಣ ಮುಂದುವರಿಸಿದನು.

ಕಾಲೇಜಿಗೇ ಹೋಗಬೇಕೆಂಬ ಗುರಿ ಜಾಕ್‌ನಿಗಿರಲಿಲ್ಲ. ಆದರೂ ಸಾಮಾನ್ಯ ಜ್ಞಾನವಾಗಲಿ—ಎಂಬ ಅಭಿಲಾಷೆ ಇದ್ದಿತು. 'ಮಾರ್ಟಿನ್ ಎಡೆನ್' ಆತ್ಮಚರಿತ್ರೆಯಲ್ಲಿ ನಿವೇದಿತವಾದಂತೆ, ಉಪಜೀವನಮಾರ್ಗ ದೊರೆತರೆ

ಸಾಕು; ಸಂಸ್ಕೃತಿ ಮುಂದೆ' ಎಂಬ ಸಿದ್ಧಾಂತಕ್ಕೆ ಬಂದು ಮುಟ್ಟಿದನು. ಲೇಖನದ ಕಡೆಗೆ ಜಾಕ್‌ನ ಮನಸ್ಸು ಹೋಯಿತು. ಅಲ್ಲೇಕೆ ತನ್ನ ದೈವ ತೆರೆಯಬಾರದೆಂಬ ಕಲ್ಪನೆ ಸಹ ಉದಿಸಿತು.

ಚಂಡಮಾರುತವನ್ನು ಕುರಿತು ಒಂದು ಲೇಖನ ಬರೆದು ಆ ವರ್ಷ ಜಾಕ್ ಒಂದು ಪತ್ರಿಕೆಯಿಂದ ಬಹುಮಾನ ಪಡೆದ. ಈ ಸಂಗತಿ ಸಂಸ್ಮರಣೀಯವಾಗಿ ಉಳಿಯಿತು. ಜಲಪರ್ಯಟನ, ಸಂಶೋಧಕ ಬುದ್ಧಿ– ಅವನ ಜೀವನವನ್ನು ಒಂದು ವಿಶಿಷ್ಟ ರೀತಿಯಲ್ಲಿ ಮಾರ್ಪಡಿಸಿದವು; ಕೀರ್ತಿ ಹಾಗೂ ಸಂಪತ್ತನ್ನು ಗಳಿಸೇನೆಂಬ ಭರವಸೆ ತಂದವು. ತನ್ನ ಆರ್ಥಿಕ ಸ್ಥಿತಿ ಸುಧಾರಿಸಿ ವೃದ್ಧಾಪ್ಯದಲ್ಲಿದ್ದ ತಂದೆಯನ್ನು ಸುಖಿಯಾಗಿರಿಸುವೆನೆಂದು ಹಂಬಲಿಸಿದನು. ಅಕ್ಕನ ತೊಡೆಯ ಮೇಲೆ ಬಂಗಾರಘಟ್ಟಿ ಚಲ್ಲಬೇಕೆಂದು ಬಯಸಿದನು. ಇದೇ ಮಹದಾಕಾಂಕ್ಷೆಯಿಂದ ಜಾಕ್ ಹೈಸ್ಕೂಲಿನಲ್ಲಿ ಮನಮುಟ್ಟಿ ಅಭ್ಯಸಿಸಿದನು. ಮುಂದೆ ಒಂದು 'ಖಾಸಿಗಿ' ಶಾಲೆಗೆ ಹೋದನು. ಅಲ್ಲಿ ಅಭ್ಯಾಸ ಹೆಚ್ಚು ಒಳ್ಳೆಯದಾಯಿತು. ಎರಡು ವರ್ಷ ಮನಃಪೂರ್ವಕ ಓದಿ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯಕ್ಕೆ ಹೋದನು. ಅಲ್ಲಿ ಅವನಿಗೆ ನಿರಾಶೆಯಾಯಿತು. ಕಲಿಸುವ ಸರಣಿಯೇ ಸರಿಬೀಳಲಿಲ್ಲ—ಮುಖ್ಯವಾಗಿ ಇಂಗ್ಲಿಶ್ ವಿಷಯದಲ್ಲಿ. ಅವನಿಗೆ ಪತ್ರಿಕಾವ್ಯವಸಾಯದ ಸಾಮಾನ್ಯ ತತ್ವಗಳನ್ನು ತಿಳಿಯಬೇಕಿತ್ತು. ಅವನ ಆಶೆ ಆಕಾಂಕ್ಷೆಗಳಿಗೆ ನೀರೆರೆವ ಮಹನೀಯರ ಸಂದರ್ಶನವೇ ಸಾಧಿಸಲಿಲ್ಲ. ಅಲ್ಲದೆ ಹತ್ತಿರಿದ್ದ ಹಣ ವ್ಯಯವಾಗಿಹೋಗಿತ್ತು. ಕಾಲೇಜಿನ ಮೊದಲನೆಯ ವರ್ಷ ಮುಗಿದಾಗ ಜಾಕ್ ಒಂದು ಲಾಂಡ್ರಿಯಲ್ಲಿ ಮೈಮುರಿ ಕೆಲಸ ಮಾಡಿ ಹೊಟ್ಟೆ ಹೊರೆದುಕೊಳ್ಳಬೇಕಾಯಿತು.

ಅಷ್ಟರಲ್ಲಿ ಅವನು ಅವಿರತವಾಗಿ ಪ್ರಬಂಧ, ಸಣ್ಣಕತೆಗಳನ್ನು ಬರೆಯಲು ಪ್ರಾರಂಭಿಸಿದನು. ತನ್ನ ಹಿಂದಿನ ಅನುಭವವೇ ಹಿನ್ನೆಲೆಯಾಗಿ ಪರಿಣಮಿಸಿತು. ಅದ್ಭುತತೆಯೆಡೆಗೆ ಮನಸ್ಸು ಹರಿಯಿತು. ಎಷ್ಟೋ ಪತ್ರಿಕೆಗಳಿಗೆ ಲೇಖನ ಕಳಿಸಿದ. ಹೈಸ್ಕೂಲ ಪತ್ರಿಕೆಗಳು ಮಾತ್ರ ಆಗೀಗ ಇವನ ಲೇಖನ ಸ್ವೀಕರಿಸುತ್ತಿದ್ದವು. ಸ್ಥಳೀಯ ಪತ್ರಿಕೆಗಳು ಸಹ ತೆಗೆದುಕೊಂಡವು. ಇಡೀ ದಿನ ಬರೆದರೂ ಹಣವೇನೂ ಹೇಳಿಕೊಳ್ಳುವಂತೆ ಬರಲಿಲ್ಲ !

ಕ್ಲೊಂಡೈಕದಲ್ಲಿ ಬಂಗಾರವಿದೆಯೆಂಬ ಪಟ್ಟವಾರ್ತೆ ಆಗ ಹರಡಿತು. ತನ್ನ ಬೀಗನೊಡನೆ ಆ ಸಂಶೋಧನೆಯ ಕಾರ್ಯದಲ್ಲಿ ತತ್ಪರನಾದ. ಉತ್ತರದ ಹಿಮಪ್ರದೇಶ ಯಾತ್ರೆ ಪ್ರಾರಂಭವಾಯಿತು. ಶಕ್ತಿ ಸಾಹಸಗಳು ಅವನಿಗೇನು ಬಂಗಾರ ತಂದುಕೊಡಲಿಲ್ಲ. ಮರಳಿ ಸ್ವದೇಶಕ್ಕೆ ಬಂದನು. ಬಂಗಾರದ ಪುಡಿಯನ್ನು ಚೀಲದಲ್ಲಿ ತರಲಾಗದಿದ್ದರೂ, ಅವನು ಅಸಂಖ್ಯ ಅನುಭವ ಕತೆಗಳನ್ನು ತಂದುದು ಸುಳ್ಳಲ್ಲ !

ಮನೆಗೆ ಮರಳಿದೊಡನೆಯೆ ಮತ್ತೆ ಉತ್ಸುಕತೆಯಿಂದ ನಿರರ್ಗಳವಾದ ಆಶಾದಾಯಕ ಬರವಣಿಗೆಯೆಡೆಗೆ ಲಕ್ಷ್ಯಹಾಕಹತ್ತಿದ. ಅರೆಹೊಟ್ಟೆಯಲ್ಲಿ, ಹಗಲೆನ್ನದೆ ಇರುಳೆನ್ನದೆ ಬಾಡಿಗೆ ಟಾಯಿಪ್ ರೈಟರಿನ ಮೇಲೆ ಕೆಲಸ ಪ್ರಾರಂಭಿಸಿದ. ಪ್ರವಾಸದ ರಸನಿಮಿಷ, ಜಲಪರ್ಯಟನದ ಸ್ಮೃತಿಚಿತ್ರಗಳು, ಮೀನು ಹಿಡಿಯುವವರ ಜೀವಿತದ ಸನ್ನಿವೇಶಗಳು, ಕ್ಲೊನ್‌ಡೈಕ ಕತೆಗಳು—ಇವಲ್ಲದೆ ಲಲಿತ ಪ್ರಬಂಧ, ನಗೆವಾತು, ಕವನ—ಹೀಗೆ ಸಾಹಿತ್ಯ ಸೃಷ್ಟಿಯಲ್ಲಿ ವೈವಿಧ್ಯವನ್ನೂ ರಸಮಯತೆಯನ್ನೂ ತರಲು ಹವಣಿಸಿದ. ತನ್ನ ಜೀವನದ ವಿವಿಧ ಅಭಿರುಚಿಗಳಿಗೆ ಚಾಲನೆ ಇತ್ತ. ಉತ್ತರ ಪ್ರದೇಶದಿಂದ ತಿರುಗಿ ಬಂದ ಐದು ತಿಂಗಳ ಕಾಲಾವಧಿಯಲ್ಲಿ 'The Over Land Monthly' ನಿಯತ ಕಾಲಿಕೆಯಲ್ಲಿ ಒಂದು ಕತೆ ಪ್ರಕಟಿಸಿದನು. ಇದೇ ಸ್ಯಾನ್ ಫ್ರಾನ್ಸಿಸ್ಕೋದ ನಾಮಾಂಕಿತ ಪತ್ರಿಕೆಯಲ್ಲಿ ಸುವಿಖ್ಯಾತ ಬ್ರೆಟ್ ಹಾರ್ಟೆಯ ಕೃತಿಗಳು ಮೂವತ್ತು ವರ್ಷಗಳ ಹಿಂದೆ ಪ್ರಕಟವಾಗಿ ಜಗತ್ತಿನ ಕಣ್ಣು ತೆರೆಯಿಸಿದ್ದವಂತೆ ! 'To The Man On Trial' ಎಂಬದು ಕತೆಯ ಶೀರ್ಷಿಕೆ. ಮರು ತಿಂಗಳವೇ 'The White Silence' ಎಂಬ ಕೃತಿ ಹೊರಬಿದ್ದಿತು. ಲಂಡನ್ನನ ಅತ್ಯುಚ್ಚ ಶ್ರೇಣಿಯ ಕತೆಗಳಲ್ಲಿಯದೊಂದಿದು. ಆದರೆ ಈ 'Over Land' ಕತೆಗಳಿಗಾಗಿ ಲೇಖಕನಿಗೆ ದೊರೆತ ಧನವೆಂದರೆ ಪ್ರತಿಯೊಂದಕ್ಕೆ ಐದೇ ಡಾಲರ್ ! ತರುಣ ಕತೆಗಾರನಿಗೆ ಇಷ್ಟೊಂದು ಸ್ವಲ್ಪ ಹಣದಿಂದ ಎಷ್ಟೊಂದು ನಿರಾಶೆ ಎನಿಸಿರಬೇಡ ! ಸುವರ್ಣ ಸಿಗುವದೆಂದು ವದಂತಿಯಿದ್ದ ಪ್ರದೇಶದ ಸಮಗ್ರ ಪ್ರವಾಸದ ಕನಸುಗಳನ್ನು ಕಥಾರೂಪವಾಗಿ ರಸವತ್ತಾಗಿ ಹೆಣೆದರೆ ಪತ್ರಿಕೆಗಳು ಡಾಲರುಗಳ ಸೋನೆಯನ್ನೇ ಕರೆದಾವೆಂಬ ಆತ್ಮವಿಶ್ವಾಸ ಅವನಿಗೆ ಉಂಟಾಗತೊಡಗಿತು. ಅಂತೇ ಮನಸ್ಸು ಕಲ್ಲುಮಾಡಿದ. ನಿರಾಶೆಗಳಿಗೆ ಎದೆ

ಗುಂಪಿಲ್ಲ. ನಾಳಿನ ಭರವಸೆಯಲ್ಲಿ ವಿಶ್ವಾಸವಿಟ್ಟ. ಮುಂದಿನ ಸಲವೆಂದರೆ 'Over Land' ಕತೆಯೊಂದಕ್ಕೆ ಏಳೂವರೆ ಡಾಲರ್ ದರ ಗೊತ್ತಾಯಿತು. ಎಷ್ಟೊ ಪ್ರಗತಿ. ಇತರ ಪೇಟೆಗಳಲ್ಲಿ ಹೆಚ್ಚು ಲಾಭ ದೊರೆಯಬಹುದೆಂದೆನಿಸ ತೊಡಗಿತು. 'The Black Cat' ಎಂಬುದು ಬಹುಮಾನ ಸ್ಪರ್ಧೆಗಾಗಿ ಬರೆದದ್ದು. ಜಾಕ್‌ನ 'Over Land' ಕತೆಗಳು ಪ್ರಕಟವಾದ ವರುಷವಲ್ಲಿ 'Atlantic Monthly' ಪತ್ರಿಕೆಯಲ್ಲಿ ಅವನ 'Odyssey of the North' ಎಂಬ ಕೃತಿ ಬಂದಿತು. ಕೀರ್ತಿ ಈಗ ಅವನ ಸಮ್ಮುಖವಾಯಿತು. 'Mc Clure' ದಲ್ಲಿಯ ಲೇಖಕ್ಕೆ ಪ್ರತಿ ಶಬ್ದಕ್ಕೆ ಎರಡು ಸೆಂಟಿನಂತೆ ಹಣ ಬರುವದೆಂದರೇನು ಸಣ್ಣ ಮಾತಲ್ಲ. ಎಷ್ಟೋ ಭಾಗ್ಯದ ಬಾಗಿಲು ತೆರೆದಂತೆ! ಕ್ಲೊನ್‌ಡಾಯಿಕೆಗೆ ಹೋಗಿ ಕೇವಲ ಎರಡು ವರುಷ ಸಂದಿದ್ದಾವು. ಲೇಖಕ, ಪರವಾ ಇಲ್ಲ, ಎನ್ನುವ ಮಟ್ಟಿಗೆ ಸಿದ್ಧಿಯಾಗಿತ್ತು. ಕೃತಿಗಳೊ? ಲೀಲಾ ಜಾಲವಾಗಿ ಮಾರಾಟವಾಗುತ್ತಿದ್ದವು. 'The Son Of The Wolf' ಎಂಬ ಶೀರ್ಷಿಕೆಯ ಕತೆಗಳ ಸಂಕಲನ ಹಾಟನ್ ಪ್ರಕಟನಾ ಸಂಸ್ಥೆಯ ಪರವಾಗಿ ಪ್ರಕಟವಾಯ್ತು. ಈಗ ೧೯೦೦ ನೇ ಇಸ್ವಿ. ಮರುವರುಷ ಮತ್ತೊಂದು ಕಥಾ ಸಂಕಲನ ಬೆಳಕು ಕಂಡಿತು. ೧೯೦೨ ರಲ್ಲಿ ಮತ್ತೂ ಒಂದು ಸಂಗ್ರಹ. ಈ ಮುಂದಿನ ವರುಷ ಎರಡು ಪುಸ್ತಕಗಳ ಮುಖಪುಟದಲ್ಲಿ ಜಾಕ್ ಲಂಡನ್ನನ ಹೆಸರು ವಿರಾಜಮಾನವಾಯ್ತು. ಮೊದಲನೆಯದು ಚಿಕ್ಕವರಿಗಾಗಿ ರಚಿಸಿದ್ದು; ಬೇರೊಂದು ಕಾದಂಬರಿ. 'A Daughter Of The Snows' ಎಂಬುದು ಅದರ ತಲೆಬರೆಹ. ಇವುಗಳಲ್ಲಾವುದೂ ಅಷ್ಟು ಹೇಳಿಕೊಳ್ಳುವ ಯಶ ತರಲಿಲ್ಲ ಲೇಖಕನಿಗೆ. ಐವರು ಪ್ರಕಟನಾಕಾರರ ಕೈಗೆ ಕೃತಿಗಳು ಬಿದ್ದು ಅವು ಗುದು ಮುರಿಗೆಯಲ್ಲಿ ಪ್ರಕಟವಾದದ್ದು ಜಾಕ್‌ನಿಂದಲೇ ತಿಳಿದಾಗ, ಅಪಯಶಸ್ಸಿಗೆ ಬೇರೆ ಅವಶ್ಯಕತೆ ಅನಿಸಲಿಕ್ಕಿಲ್ಲವಷ್ಟೆ!

೧೯೦೩ ರಲ್ಲಿ ಜಾಕ್‌ನ ಆಕಾಂಕ್ಷೆ ನೆರವೇರಿತೆನ್ನಬಹುದು. ಆಗ 'Call Of The Wild' ಪ್ರಕಟವಾಯಿತು. ಹಿಂದಿನ ಅವನ ಕೃತಿಗಳನ್ನು ಮನವಾರೆ ಹೊಗಳದ ವಿಮರ್ಶಕರ ಕಣ್ಣಿಗೆ ಈಗ ಅಂಜನ ಹಚ್ಚಿದಂತಾಯಿತು. ಲೋಕಪ್ರಿಯತೆಯ ಸೆಳವಿಗೆ ಸಿಕ್ಕ ಜಾಕ್ ಈಗ. ಪುಸ್ತಕಗಳು ಹಾ ಹಾ ಎನ್ನುವದರಲ್ಲಿ ಮಾರತೊಡಗಿದವು. ವಿದ್ವಜ್ಜನರ ಕಟಾಕ್ಷ ಇವನ ಮೇಲೆ

ಬಿದ್ದಿತ್ತು. ಜಾಕ್ ಭಾಷಣ ಮಾಡುವಾಗ ಆಗಿನ ಶಿಕ್ಷಣ ಪದ್ಧತಿಯನ್ನು ಟೀಕಿಸಿದ. ಪ್ರೊಫೆಸರ ಚಾರ್ಲ್ಸ್ ಗೇಲಿ ಮೊದಲಾದವರು ಅವನ ವಿಚಾರ ಸರಣಿಗೆ ತಲೆದೂಗಿದರು. ವಿಶ್ವವಿದ್ಯಾಲಯಗಳು ಸಾಹಿತ್ಯದ ನೈಜ ಕಲ್ಪನೆ ತಂದುಕೊಡುತ್ತಿಲ್ಲವೆಂದು ಸ್ಫೂರ್ತಿಯುತನಾಗಿ ವಿವರಿಸಿದ. ಕೇವಲ ಹಿಂದಿನ ಕೃತಿ ಓದಿಸಿದರೆ ಬಂದ ಭಾಗ್ಯವೇನು? ಇಂದಿನ ವಾತಾವರಣವನ್ನಾದರೂ ಕಡೆಗಣಿಸಕೂಡದೆಂದು ವಾದಿಸಿದ. "ಆಯಿತು. ನಿನ್ನ 'Call Of The Wild' ಕಾಲೇಜಿನಲ್ಲಿ ಓದಿಸುವೆವೆಂದು" ಪ್ರೊಫೆಸರರು ನುಡಿದರು! ನಗೆಯ ಕೋಲಾಹಲವೆದ್ದಿತು. ಜಾಕ್‌ನೂ ಗಹಗಹಿಸಿ ನಕ್ಕ ಅವರ ಮಾತಿಗೆ!

'Call Of The Wild' ಕಾದಂಬರಿ ಲೋಕಪ್ರಿಯತೆಗೆ ಪಾತ್ರವಾಗುವ ಮೊದಲು, ಜಾಕ್ ಲೇಖನ ಕಲೆಯನ್ನು ವ್ಯವಸಾಯವೆಂದು ಮಾರ್ಪಡಿಸಿ ಕೊಂಡಿದ್ದ. ೧೯೦೦ರ ಮಾರ್ಚ ಒಂದನೆಯ ದಿನಾಂಕ ಕ್ಲಾಡಸ್ಲೆ ಜಾನರಿಗೆ ಹೀಗೆ ಓಲೆ ಬರೆದ—

" ಹಣಕ್ಕಾಗಿ ನಾನು ಬರೆಯುವೆ. ಕೀರ್ತಿ ಬಂದರೆ ಇನ್ನೂ ಹಣ ದೊರೆಯುವದು. ಹೆಚ್ಚು ಹಣದಿಂದ ಜೀವನದಲ್ಲಿ ಹೆಚ್ಚು ಸುಖ. ಬರೆಯಲು ಕುಳಿತಾಗ ನಿರಾಸೆಯೇ ನನ್ನನ್ನಾವರಿಸುವದು. ಅಲೆದಾಡಲು ಹೋಗಬಾರದೆ ನಿಸರ್ಗದೆಡೆಯಲ್ಲಿ?— ಎಂಬ ವಿಚಾರ ಬರುವದು. ಈ ಹಣದ ಬೆನ್ನು ಹತ್ತಿದ್ದು ನನಗೆ ಹಾನಿಯನ್ನುಂಟು ಮಾಡದಿದ್ದರೆ ಸಾಕು. ಆದರೆ ದುಂದುಗಾರಿಕೆಗೆ ತುತ್ತಾಗಬಾರದೆಂದು ಈಶನಲ್ಲಿ ನನ್ನ ಮೊರೆ."

ಈ ವೇಳೆಗೆಂದರೆ ಅವನ ಲಗ್ನವಾಗಿ ಒಬ್ಬ ಮಗಳು ಹುಟ್ಟಿದ್ದಳು. ತನ್ನ ತಾಯಿ ಹಾಗೂ ಸಹೋದರನ ಮಗನಿಗಾಗಿ ಹಣದ ವ್ಯವಸ್ಥೆಯಲ್ಲಿ ತೊಡಗಿದನು. ಬಂಧು-ಬಳಗದವರಿಗೆ ಅವನ ಮನೆಗೆ ಮುಕ್ತದ್ವಾರವಿತ್ತು. ಜಾಕ್‌ನ ಬರವಣಿಗೆ ನೆಟ್ಟಗೇ ನಡೆದಿತ್ತು. ಪ್ರತಿ ಶಬ್ದಕ್ಕೆ ಒಂದು ಸೆಂಟ ದರ ಆಗಿತ್ತು. ಲೇಖನ ವ್ಯವಸಾಯದೆಡೆಗೆ ಮನಸ್ಸೇ ಹರಿಯದು ಇತ್ತೀಚೆಗೆ— ಎಂದದ್ದು, ಬಹುಶಃ ಅತಿಶಯೋಕ್ತಿಯಾಗಿರಬೇಕು. ಆದರೆ ಲೇಖನವೊಂದೇ ಕೆಲಸವಾದರೆ ಬೇಜಾರ ಉಂಟಾಗುವದು ಸಹಜ. 'ಮಾರ್ಟಿನ್ ಎಡೆನ್' ಎಂಬ ಅವನ ಹೊತ್ತಗೆಯಲ್ಲಿಯ ನಾಯಕ—ಗ್ರಂಥಕರ್ತನೆಂದು ಖ್ಯಾತಿವೆತ್ತೊಡನೆಯೇ—ಆತ್ಮಹತ್ಯ ಮಾಡಿಕೊಳ್ಳುವಂತೆ ಮಾಡಿರುವನು.

ಅದ್ಭುತತೆಯನ್ನು ಎದೆಗವಚಿಕೊಂಡ ನಮ್ಮ ಲೇಖಕನ ಗತಿ ಏನಾಯಿತು? ಅವನ ಮೊದಲ ವಿವಾಹ ಅನಿರೀಕ್ಷಿತವಾದುದಷ್ಟೆ ಅಲ್ಲ, ಅಲ್ಲಿ ಮೋಹಕತೆ ಸಹ ಉಳಿಯಲಿಲ್ಲ. ನಿತ್ಯ ವ್ಯವಹಾರ ಅವನಿಗೆ ರುಚಿಸಲಿಲ್ಲ. ಒಂದು ಕಟ್ಟಿನಲ್ಲಿ ಕ್ರಮಿಸುವದೆಂವರೆ ಜಾಕ್‌ನಿಗೆ ಜೀವದ ಸುತ್ತು ಬಂದಂತೆನಿಸುತ್ತಿತ್ತು. ಇಂಥದೇ ಜೀವನ ಬಹುಕಾಲ ಸಾಗಿಸುವದು ಅವನಿಗೆ ದುಸ್ತರವೆಂದೇ ಅನಿಸಿರಬೇಕು.

೧೯೦೨ ರ ಜುಲೈ ತಿಂಗಳಲ್ಲಿ ಅಸೊಸಿಯೆಟೆಡ್ ಪ್ರೆಸ್ಸಿನವರು ಅವನಿಗೆ ಬೋರ ಯುದ್ಧದ ವಿಶೇಷ ಸುದ್ದಿಗಾರನೆಂದು ದಕ್ಷಿಣ ಆಫ್ರಿಕೆಗೆ ಹೋಗೆಂದು ಹೇಳಿದರು. ಆದರೆ ನ್ಯೂಯಾರ್ಕಿನ ದಾರಿಯಲ್ಲಿದ್ದಾಗಲೇ ಒಪ್ಪಂದದ ಮಾತು ಕತೆ ತಿಳಿದುಬಂದವು. ಆ ಮೇಲೆ ಒಮ್ಮೆಲೆ ಪೂರ್ವಕ್ಕೆ ತಿರುಗಿ ಮ್ಯಾಕ್ಮಿಲನ್ ಕಂಪನಿಯವರಿಗೆ, ಲಂಡನ್ನಿನ ಹೊಲಸುಕೇರಿಯ ಬಗ್ಗೆ ಗ್ರಂಥ ಬರೆಯುವೆನೆಂದು ಮಾತು ಕೊಟ್ಟನು. 'The Children Of The Abyss' ಎಂಬುದೇ– ಏಳು ವಾರ ಲಂಡನ್ನದಲ್ಲಿದ್ದು ನೋಡಿ ಬರೆದ ಪುಸ್ತಕ. ಮನೆಗೆ ಹಿಂತಿರುಗಿದೊಡನೆಯೇ ಹೆಂಡತಿಯಿಂದ ಬಿಡುಗಡೆ ಮಾಡಿಕೊಂಡ. ಮುಂದಿನ ವಸಂತ ಋತುವಿನಾಗಳೆ ರಶಿಯಾ ಜಪಾನ ಯುದ್ಧದ ಸುದ್ದಿಗಾರನಾಗಿ ಹೋದವ ಮತ್ತೆ ಮನೆಗೆ ಬಂದ. ಸಮಾಜವಾದಿಯಾಗಿ ನಗರಸಭೆಗೆ ಸೇವೆ ಸಲ್ಲಿಸಿದ. ಗ್ಲೆನ್ ಎಲೆನ್ನಿನ ಹತ್ತಿರ ನೂರಾ ಇಪ್ಪತ್ತೊಂಬತ್ತು ಎಕರೆಯ ಭೂಮಿಯನ್ನು ಕೊಂಡ. ಪ್ರವಾಸಿಯಾಗಿ ಉಪನ್ಯಾಸಗಳನ್ನಿತ್ತ. ಮೊದಲಿಗಿಂತ ಹೆಚ್ಚು ವಿಜೃಂಭಣೆಯಿಂದ ೧೯೦೫ ರಲ್ಲಿ ಮತ್ತೆ ಮದುವೆಮಾಡಿಕೊಂಡ. ಮರುವರ್ಷ ವೆಸ್ಟ ಇಂಡೀಜಿಗೆ ಹೋಗಿ ಬಂದು ತನ್ನ ಫಾರ್ಮಿನ ಸುಧಾರಣೆಗಾಗಿ ವಿಸ್ತ್ರುತ ಹಾಗೂ ವೆಚ್ಚದ ಯೋಜನೆ ಕೈಕೊಂಡ. ವಿನೋದಾರ್ಥವಾಗಿ ಸಂಚರಿಸುವ ದೋಣಿಯ ಸಹಾಯದಿಂದ ಜಗತ್ ಪ್ರದಕ್ಷಿಣೆ ಮಾಡಬೇಕೆಂಬ ಯೋಜನೆ ಕೈಕೊಂಡ. 'ಈ ವೇಳೆಯಲ್ಲೆಲ್ಲ ಬರೆಯುವದು ನಡೆದೇ ಇದ್ದಿತು.' ಬಂದ ಹಣದಿಂದ ಭೂಮಿಯನ್ನು ಸಾಗುಮಾಡುವ, ದೋಣಿಕಟ್ಟುವ ವಿಚಾರವಿಟ್ಟು ಕೊಂಡಿದ್ದ.

'ಸ್ನಾರ್ಕ'ದಲ್ಲಿಯ ಸಂಚಾರವನ್ನು ಜಾಕ್ ಬಿಟ್ಟುಕೊಡಬೇಕಾಗಿ ಬಂದಿತು. ಸಮುದ್ರ ಪ್ರವಾಸದಲ್ಲಿಯೆ ಬಲಿಯುವ ಬೇನೆ ಲಂಡನ್ನಿನಲ್ಲಿ

ಹಬ್ಬಿದುದು ಇದಕ್ಕೆ ಕಾರಣ. ಜಗತ್ ಪ್ರದಕ್ಷಿಣೆ ಸಾಧಿಸದಿದ್ದರೂ ಆರು
ತಿಂಗಳ ಸಾಮಾನ್ಯ ಪ್ರವಾಸವಾಯಿತು. ಅದು ಸಾಹಸಮಯ ಹಾಗೂ ರಸ
ವತ್ತಾದ ಸನ್ನಿವೇಶಗಳಿಂದ ಕೂಡಿದ್ದಾಗಿ ಪರಿಣಮಿಸಿತು. ಆದರೂ ಈ ಎಲ್ಲ ವೇಳೆ
ಜಾಕ್ ಬರೆಯುವುದನ್ನೇನೂ ಬಿಟ್ಟಿರಲಿಲ್ಲ. 'The Log Of The Snark',
'The Cruise Of Snark' ಎಂಬುವೇ ಆಗ ಹೊರಹೊಮ್ಮಿದ ಕಲಾ-
ಕೃತಿಗಳು.

ಜಾಕ್‌ನ ಜೀವನದ ಕೊನೆಯ ಆರು ವರ್ಷಗಳಲ್ಲಿ ಇವೇ ಮಾದರಿಯ
ಚಟುವಟಿಕೆಗಳು ನಡೆದವು. ನಾಲ್ಕು ಕುದುರೆಗಳ ವಾಹನದಲ್ಲಿ ಕುಳಿತು
ಪ್ಯಾಸಿಫಿಕ್ ದಂಡೆಯ ಪ್ರದೇಶ ಯಾತ್ರೆ ಮುಗಿಸಿದನು. ಹಾರ್ನ್, ಮೆಕ್ಸಿಕೊ
ಹವಾಯಿ ಪ್ರದೇಶಗಳನ್ನು ನಿರೀಕ್ಷಿಸಿ ಬಂದನು. ತನ್ನ ಸುವ್ಯವಸ್ಥಿತವಾದ
ಫಾರ್ಮಿನಲ್ಲಿ— ದ್ರಾಕ್ಷೆಯ ಬಳ್ಳಿ, ನೀಲಗಿರಿ ಗಿಡ, ಮೊದಲಾದವನ್ನು ಬೆಳೆ
ಸಿದನು. ೧೯೧೬ ರ ನೊವ್ಹೆಂಬರ ೨೨ನೇ ದಿನಾಂಕ ಜಾಕ್ ಮರಣ ಹೊಂದಿ
ದನು. ಯುರೇಮಿಯಾದಿಂದ ಮರಣವಾಯ್ತೆಂದರೂ, ಚರಿತ್ರೆಕಾರಳಾದ
ಹೆಂಡತಿಯೇ ಬರೆದಂತೆ ದಣಿವು, ಬೇಜಾರಗಳ ಮೂಲಕ ಮರಣ ಉಂಟಾಯಿ
ತಂತೆ! ಆಗ ಅವನ ವಯಸ್ಸು ನಲವತ್ತು. ಅವನ ಖ್ಯಾತಿ ಅಂತಾರಾಷ್ಟ್ರೀಯ
ವೆನಿಸಿತ್ತು. ರಶಿಯಾದಲ್ಲಿ ಇವನಿಗೆ ಅಖಂಡ ಲೋಕಪ್ರಿಯತೆ ಬಂದಿತ್ತು.
ಲ್ಯಾಂಡ್ರ್ಯು ಹಾಗೂ ಕ್ಯೂಪ್ರಿನ್‌ರ ಪ್ರೇರಣೆಗನುಗುಣವಾಗಿ ಜಾಕ್‌ನ ಸಮಗ್ರ
ಕೃತಿಗಳ ಎರಡು ಆವೃತ್ತಿ ಹೊರಟವು. ಫ್ರಾನ್ಸಿನಲ್ಲಿ ಅವನನ್ನು ಅಭ್ಯಸಿಸ
ದವರೇ ವಿರಳ. ಯುರೋಪದ ಮುಖ್ಯ ಭಾಷೆಗಳಲ್ಲೆಲ್ಲ ಅವನ ಕೃತಿಗಳು
ಅನುವಾದಿತವಾದವು. ತನ್ನ ದೇಶದ ಹೊರಗೆಲ್ಲ ಅಮೇರಿಕೆಯ ಪ್ರತಿಭಾವಂತ
ಲೇಖಕನೆಂದು ಹೆಸರು ಪಡೆದನು.

ಈ ರಂಗುರಂಗಾದ ಜೀವನದಲ್ಲಿ ಪ್ರಚಲಿತ ತಾತ್ವಿಕ ವಿಚಾರ ಪ್ರಣಾಳಿ
ಗಳನ್ನು ಅಭ್ಯಸಿಸಲು ಜಾಕ್‌ನಿಗೆ ಅನುವು ದೊರೆಯಿತು. 'The Human
Drift' ಎಂಬ ಪ್ರಬಂಧದಲ್ಲಿ ಅವನು ಹರ್ಬರ್ಟ ಸ್ಪೆನ್ಸರನನ್ನು ಉದಾಹರಿ
ಸುತ್ತಾನೆ. ಕಾಲಕ್ರಮದಿಂದ ಬಂದ ಕ್ರಾಂತಿ, ಮತ್ತು ಅದರ ಮೇಳ ಜಾಕ್
ಲಂಡನ್ನನ ಹೃದಯವನ್ನು ಸೂರೆಗೊಂಡು ವಿಶ್ವದ ವಿರಾಟ್ ದರ್ಶನ ಮಾಡಿಸಿ
ದುವು. ಉತ್ಕ್ರಾಂತಿ, ಪ್ರಳಯ ಇವು ಜೀವನದ ಗತಿಗಳು ಎಂಬ ಅರಿವು

ಆಯಿತು. ವಿಜ್ಞಾನದಿಂದ ಮನವರಿಕೆಯಾಗತಕ್ಕ ಸಂಗತಿಗಳಲ್ಲ ಇವು! ಲಂಡನ್ನನಲ್ಲಿ ಕಂಡುಬಂದ ಒಂದು ದೊಡ್ಡ ಗುಣವೆಂದರೆ, ಕುತೂಹಲ ಬುದ್ಧಿ– ಉತ್ಸಾಹಪೂರಿತ ಕುತೂಹಲ ಬುದ್ಧಿ! ಅವನಲ್ಲಿ ತಾಳ್ಮೆ ಕಡಿಮೆ. ಅಭ್ಯಾಸಿಗೆ ಅದು ಅತ್ಯವಶ್ಯ. ಅಂತೇ ಅವನ ಸಿದ್ಧಾಂತಗಳು ಭಾವನೆಯ ಕಂಬದ ಮೇಲೆ ನಿಂತವು. ತಾತ್ವಿಕ ವಿಷಯದಲ್ಲಿ ಎಷ್ಟಾದರೂ ಅವನು ವಿಲಾಸಿಯೆ!

ಕೇವಲ ತಾತ್ವಿಕನೆಂದು ಜಾಕ್‌ನಿಗೆ ಆಧುನಿಕ ಸಾಹಿತ್ಯದಲ್ಲಿ ವಿಶಿಷ್ಟ ಮನ್ನಣೆ ದೊರೆತಿಲ್ಲ. ಅವನ ಪ್ರಬಂಧಗಳು, ಕತೆಗಳು, ಕಾದಂಬರಿಗಳು— ಉತ್ಕ್ರಾಂತಿಯ ಮೇಲೆ ಪ್ರಾಮಾಣ್ಯ ಪಡೆದುವಲ್ಲ; ಫ್ರ್ಯೂಡ್, ನಿಟ್ಷೆ ಇವರ ಸಿದ್ಧಾಂತಗಳ ಮೇಲೆ ಪಠ್ಯ ಪುಸ್ತಕಗಳಲ್ಲ; ಮಾರ್ಕ್ಸನ ಸಮಾಜವಾದವನ್ನು ಅವು ಬಿಂಬಿಸುವಂತಹವಲ್ಲ. ಆದರೆ ಅದ್ಭುತತೆಯನ್ನು ರೋಮಾಂಚಕತೆಯನ್ನು ಮನವಾರೆ ಮೆಚ್ಚಿದವನು ವಿಜ್ಞಾನಿಯೂ ಆಗಲಿ, ತಾತ್ವಿಕನೂ ಆಗಲಿ, ಎಂದು ಅಪೇಕ್ಷಿಸಿದರೆ ಅವನಂಥ ಎಬಡ ವಿಮರ್ಶಕ ಅವನೇ ಆದಾನು. ಅವನ ಕಲಾ ಕೃತಿಗಳನ್ನೆಲ್ಲ ಅದ್ಭುತತೆಯ ಕೃತಿಗಳೆಂದೇ ನಿರ್ಣಯಿಸಬೇಕು.

ನಿಶ್ಚಿತವಾಗಿಯೂ ಅದ್ಭುತ, ವಾಸ್ತವ ಎಂಬ ಈ ಎರಡು ಪದಗಳ ಪ್ರಯೋಗದ ವಿಷಯದಲ್ಲಿ ಗಲಭೆ ಎದ್ದಿರುವುದುಂಟು. ತಮ್ಮ ಅಸ್ತವ್ಯಸ್ತ ವಿಚಾರ ಸರಣಿಯನ್ನು ಮುಚ್ಚಿಕೊಳ್ಳಲಿಕ್ಕೆಂದು ಎಷ್ಟೋ ಲೇಖಕರು ಈ ಶಬ್ದ ಗಳನ್ನು ತಪ್ಪು ತಪ್ಪಾಗಿ ಪ್ರಯೋಗಿಸಿ ಓದುಗರಿಗೆ ತೊಡಕು ಉಂಟುಮಾಡು ತ್ತಾರೆ. ಲಂಡನ್‌ನಿಗೆ ವಾಸ್ತವವಾದಿಯೆನ್ನುವರು. ವಾಸ್ತವ ಸನ್ನಿವೇಶ ಹಾಗೂ ಬಹುಜನರಿಗೆ ಬೇಕಾಗದ ವಿಷಯಗಳನ್ನೇ ಕುರಿತು ಅವನು ಬರೆಯಲೆಳಿಸಿದ ನೆಂದು ಹೀಗೆ ಕರೆದಿರಬಹುದು. ಸ್ವತಃ ಜಾಕ್‌ನೇ ತಾನು ವಾಸ್ತವವಾದಿ ಯೆಂದು ಕರೆದುಕೊಂಡದ್ದು ನಮಗೆ ಗೊತ್ತಿಲ್ಲವೆ? ತನ್ನ ಸ್ವಭಾವದ ರೀತಿ ಗಳನ್ನೇ ಬಿಂಬಿಸಿದ 'Martin Eden' ಎಂಬ ಕಲಾಕೃತಿಯಲ್ಲಿ ಅವನು ಬರೆದುದಿಂತು: "ಅವನ ಬುದ್ಧಿಗೆ ಕಲ್ಪಕತೆಯ ಕಾಂತಿ ವಿಶೇಷವಾಗಿ ಇದೆ ಎಂದು ಎನಿಸಿಕೊಳ್ಳುವಂತಾದರೂ ವಾಸ್ತವತೆಯ ಬಗೆಗೆ ಅವನ ಪ್ರೇಮ ಎಷ್ಟೂ ಕಡಿಮೆಯಾಗಿರಲಿಲ್ಲ." ಅಂತೇ ವಿಶಾಲ ಪ್ರಪಂಚದಲ್ಲಿ ತನ್ನ ಅರಿವಿಗೆ ಬಂದ ಅಸಂಖ್ಯಾತ ವಸ್ತುಗಳ ಬಗ್ಗೆ ಅವನು ಬರೆಯದೇ ಬಿಡಲಿಲ್ಲ. ಆದರೆ

ಕಟ್ಟುಕತೆಯಲ್ಲಿಯ ವಾಸ್ತವತೆಯ ತಳಹದಿ ಎಂದರೆ ತೀರ ಕೊರೆದು ಕೊರೆದು ಹೇಳುವದಾಗಿರದೆ, ಸಾಮಾನ್ಯ ವ್ಯಕ್ತಿ ಜೀವನದಿಂದ ಏನು ತಿಳಿಯಬೇಕು, ಕಲಿಯಬೇಕೆಂಬುದರ ಬಗೆಗೆ ಬರೆದರೆ ಸಾಕು. ಜಾಕ್ ಲಂಡನ್‌ನಿಗೆ ವಿದಿತ ವಾದ ಚಿಕ್ಕಪುಟ್ಟ ರೋಮಾಂಚಕಾರಿ ಸಂಗತಿಗಳು ಸಾಮಾನ್ಯ ಓದುಗರಿಗೆ ತಿಳಿದಿರಲೇ ಇಲ್ಲ. ಈ ಮೊದಲೆ ನಮಗೆ ತಿಳಿದಂತೆ, ಅವನ ಜೀವನದ ವಿಶೇಷ ಭಾಗವೆಲ್ಲ ಜಲಪರ್ಯಟನದಲ್ಲಿಯೇ ಕಳೆದುಹೋಗಿತ್ತು. ಸಮುದ್ರದ ವಿಚಿತ್ರ ಜೀವನ, ಅಲ್ಲುಂಟಾದ ಚಿತ್ರಮಯ ಪಾತ್ರಗಳ ಸಹವಾಸ, ಸಾಹಸೀ ವೃತ್ತಿ, ಸಂಶೋಧಕ ಮನಸ್ಸು—ಇವೆಲ್ಲ ಅಸಾಧಾರಣವೆನ್ನಲೇಬೇಕು. ಅವನ ಇರು ವಿಕೆಯ ರೀತಿ, ಜೀವನದ ವೈಶಿಷ್ಟ್ಯಗಳನ್ನು ಸೂಕ್ಷ್ಮವಾಗಿ ಬೆದಕಿ ನೋಡಿ ದ್ದಾದರೆ, ಬರವಣಿಗೆ ಸಹ ವಿಶಿಷ್ಟ ರೀತಿಯದಾಗದೆ ವಿಧಿ ಇಲ್ಲ. ಅಸಾಮಾನ್ಯತೆ, ಅಸಹಜತೆ ಅಲ್ಲಿ ಹಣಿಕಿಕ್ಕಲೇಬೇಕು. ಅಸಾಮಾನ್ಯತೆಯೇ ರೋಮಾಂಚ ಕತೆಯ ಜೀವಾಳವಲ್ಲವೆ? ಜಾಕ್ ಲಂಡನ್ನನನ್ನು ವಾಸ್ತವವಾದಿಯೆಂದು ಕರೆಯಲು ಬೇರೆ ಹಲವು ಆಧಾರಗಳಿವೆ. ವಾಸ್ತವತೆ, ಸ್ವಾಭಾವಿಕತೆ ಈ ಎರಡೂ ವಿಚಾರ ಪ್ರಣಾಲಿಗಳಲ್ಲಿ ಸಾಕಷ್ಟು ಸಂದೇಹಗಳು ನುಗ್ಗಿವೆ; ಅಲ್ಲದೆ ಲೋಕಪ್ರಿಯತೆಯನ್ನೂ ಗಳಿಸಿವೆ. ಸ್ವಾಭಾವಿಕ ಕಟ್ಟುಕತೆಗಳನ್ನು ರಚಿಸುವ ಮಹಾನುಭಾವರು ಮಾನವತೆಯ ಮೂಲಭೂತ ಸ್ಥಿತಿಯ ವಿಷಯವಾಗಿ ಬರೆ ಯುವದುಂಟು. ಮಾನವನ ಸಂಸ್ಕಾರವಂತಿಕೆಯ ಗತಿ ಬೇರೆಯೇ ಇರುವ ದಲ್ಲವೆ? ಜಾಕ್ ಲಂಡನ್ನನು ನವಮನ್ವಂತರದ ಹೊಸತಿಲದ ಬಳಿ ಕುಳಿತು ಬರೆಯಲುಪಕ್ರಮಿಸಿದಾಗ, ಈ ಸ್ವಾಭಾವಿಕತೆಯ ಪುರಸ್ಕರ್ತರೆಂದೆನಿಸಿ ಕೊಂಡ ಎಷ್ಟೋ ಯುವಜನ ಅಮೇರಿಕನ್ ಕಾದಂಬರಿಕಾರರ ಪಂಗಡವೇ ಪ್ರಬಲವಾಗಿದ್ದಿತು. ಸ್ಟಿಫನ್ ಕ್ರೇನ, ಫ್ರ್ಯಾಂಕ್ ನಾರಿಸ್ ಅವರಲ್ಲಿ ಮುಂದಾಳುಗಳು. ಈ ಗುಂಪಿನಲ್ಲಿಯೇ ಲಂಡನ್ನನಿಗೆ ಉಚಿತ ಸ್ಥಾನ ದೊರೆ ಯಿತು. ವಿಚಿತ್ರ ಹಾಗೂ ಸಾಮಾನ್ಯ ವಸ್ತುಗಳ ಮೇಲಿಂದ ಆ ಆ ಕಟ್ಟುಕತೆ ಗಳು ರೋಮಾಂಚಕವೊ ಸ್ವಾಭಾವಿಕವೊ ಆಗುವವೆಂದು ಹೇಳಬೇಕು. ಕ್ರೇನನ 'Maggie' ಎಂಬದು ಸ್ವಾಭಾವಿಕತೆಯನ್ನೊಳಗೊಂಡ ವಾಸ್ತವ ಕಲಾಕೃತಿ. ಲಂಡನ್‌ನ 'The Sea Wolf' ನಿಶ್ಚಯವಾಗಿಯೂ ಸ್ವಾಭಾವಿ ಕತೆಯ ಅಂಶದ ಅದ್ಭುತರಮ್ಯ ಹೊತ್ತಗೆ.

ಈ ಭೇದ ಪ್ರಭೇದಗಳಿಗೇನೂ ಅಷ್ಟು ಬೆಲೆ ಇಲ್ಲ. ಜಾಕ್‌ನ ಬಗೆಗೆ ಮುಖ್ಯವಾಗಿ ಹೇಳಬೇಕೆಂದಿರುವ ಸಂಗತಿಯೆಂದರೆ, ಅವನೊಬ್ಬ ಒಳ್ಳೆ ಕತೆಗಾರ. ಅವನು ಹುಟ್ಟಾ ಕುಶಲ ಕತೆಗಾರ. ಮನಸು ಹಿಡಿಯುವಂತೆ ಕತೆ ಹೇಳುವ ಕಲೆ ಇಲ್ಲದಿದ್ದರೆ, ಸಮರ್ಪಕ, ಕಾವ್ಯಮಯ ಬಣ್ಣನೆ ಇಲ್ಲದಿದ್ದರೆ, ನಾಟಕೀಯತೆ ತಲೆದೋರದಿದ್ದರೆ ಉಳಿದ ಯಾವ ಜಾದೂಗಾರಿಕೆ ಚಿರಕಾಲ ಉಳಿದೀತು ?

ಅವನ ಕೃತಿಗಳು ಅನುಪಮ ಎಂದರೆ ಯಾರೂ ಅಲ್ಲಗಳೆಯಲಾರರು. ಜಾಕ್ ಬರೆಯುವಾಗಲೆಲ್ಲ ಅವನಿಗೆ ಸಾಲದ ಹೊರೆ ಇತ್ತೆಂದು ಅವನ ಓಲೆ ಗಳೇ ಸಾರಿ ಸಾರಿ ಹೇಳುತ್ತವೆ. ನಿಜಕ್ಕೂ 'The Little Lady Of The Big House', 'The Mutiny Of The Elsinore', 'The Valley Of The Moon'—ಇವೆಲ್ಲ ಕೃತ್ರಿಮತೆಗೆ ಮಾಧರಿಗಳು. ಆದರೆ ಲಂಡನ್ನನ ಕೃತಿಗಳಲ್ಲಿ ಅನೇಕ ಸುಂದರವಾಗಿವೆ. ಕೆಲವು ಭಾಗ ನಿಜಕ್ಕೂ ಚಿರಂತನವಾದ ಬೆಲೆ ಮೈಗೂಡಿಸಿಕೊಂಡಂತಹವು.

ಕಥನ ಕಲೆ ಸಾಧಿಸಿಕೊಂಡ ಹಲವಾರು ಕಟ್ಟುಕತೆಗಾರರು ತಮಗೆ ಬಂದ ಅನುಭವಗಳನ್ನೇ ತಮ್ಮ ಕೃತಿಗಳಲ್ಲಿ ರೂಪಿಸುವರು. ಅಹಮಹಮಿಕೆ ಇದ್ದ ಲಂಡನ್ನನ ಕೃತಿಗಳಲ್ಲಿ ಆತ್ಮ ಚರಿತೆಯ ಲಕ್ಷಣಗಳು ತಾವೇ ತಾವಾಗಿ ಬಂದಿವೆ. 'ಮಾರ್ಟಿನ್ ಎಡನ್' ಗ್ರಂಥದಲ್ಲಿ ಲೇಖಕನೇ ಪ್ರಮುಖ ಪಾತ್ರವಾಗಿರುವ. 'The Road' ಎಂಬದು ಅವನ ಸಂಚಾರಿ ಜೀವನ ಬಣ್ಣಿಸುವದು. 'John Barley corn' ಎಂಬದು ಸುರಾದೇವಿಯ ಲೀಲೆ ವಿವರಿಸುವದು. ಭೂಪ್ರದ-ಕ್ಷಿಣೆ ಮಾಡಬೇಕೆಂದು ಯೋಚಿಸಿದಾಗಿನ ವಿವರಗಳ ಕತೆ— 'The Cruise Of The Snark' ಎಂಬಲ್ಲಿದೆ. 'The Valley Of The Moon' ತನ್ನ ಒಕ್ಕಲುತನ ಪ್ರಯೋಗದ ವೃತ್ತಾಂತ. ಲಂಡನ್ ನಗರದ ಹೊಲಸುಕೇರಿಯ ಬೀಭತ್ಸ ನೋಟಗಳು 'The People of the Abyss' ದಲ್ಲಿವೆ. ಅವನ ಜೀವನದ ವಿವಿಧ ಮುಖಗಳ ಅನುಭವಗಳು ಇನ್ನಿತರ ಕತೆ, ಕಾದಂಬರಿಗಳಲ್ಲಿ ಸಹಜವಾಗಿ ಬಂದಿವೆ.

ಜಾಕ್‌ನ ಅಹಂಭಾವದ ಬಗೆಗೆ ಒಂದೆರಡು ಮಾತು ಇಲ್ಲಿ ಹೇಳುವದು ಅನುಚಿತವಾಗಲಾರದು. ಅವನ ಜೀವದ ಗೆಳೆಯರು ಅವನ ಈ ದೋಷವನ್ನು

ಅಷ್ಟು ಗಣಿಸುತ್ತಿರಲಿಲ್ಲ. ಬೇರೆ ಅನೇಕರಿಗೆ ಇದು ಸರಿಯೇ ಬೀಳುತ್ತಿರಲಿಲ್ಲ. ಅವನ ಮೋರೆ ತಪ್ಪಿಸುತ್ತಿದ್ದರು. ಅಂತೇ ಶತ್ರುಗಳೂ ಆದರು. ಅವನ ಜಪಾನಿ ಅಂಗರಕ್ಷಕನು ಅವನಿಗೆ ತಿರಸ್ಕಾರ ತೋರಿಸುತ್ತಿದ್ದನು. ಒಮ್ಮೆ ಯಂತೂ ಅತಿಥಿಗಳು ಬಂದಾಗ— "ದೇವರು ಸ್ವಲ್ಪ ಸರಾಯಿ ಸ್ವೀಕರಿಸುವರೊ ?" ಎಂದು ಕೇಳಿ ಸೇಡು ತೀರಿಸಿಕೊಂಡ. ಅವನ ಚರಿತ್ರಗಾರ್ತಿಯಾದ ವಿಧವೆಯೇ ಹೇಳುವಂತೆ, ಜಾಕ್‌ನದು ರಾಜಕುವರರ ಅಹಂಭಾವ !

ಆತ್ಮಚರಿತೆ ನಿವೇದಿಸಬೇಕೆಂಬ ಭರದಲ್ಲಿ ಜಾಕ್ ತಾನೇ ಕಥಾನಾಯಕನಾದನಷ್ಟೆ ! ಅದರಿಂದ ವಿಶಿಷ್ಟ ಸಂದರ್ಭಗಳಲ್ಲಿ ಜಾಕ್‌ನ ನಡೆವಳಿಕೆ ನಮಗೆ ಅರ್ಥವಾಯಿತು. ಆದರೆ ಮಹದ್ ವ್ಯಕ್ತಿಗಳನ್ನು ಅವನೇಕೆ ನಿರ್ಮಿಸಬಾರದಿತ್ತು ? 'ಡೇವ್ಹಿಡ್ ಕಾಪರ ಫೀಲ್ಡ್'ನಲ್ಲಿ ಡಿಕೆನ್ಸ ಹಾಗೆ ಮಾಡಲಿಲ್ಲವೆ ? ಆದರೆ ಬಕ್‌ನ ಹೊರತಾಗಿ ಲಂಡನ್, ಜಗತ್ತಿಗೆ ಯಾವ ಮಾರ್ಮಿಕ ಪಾತ್ರವನ್ನೇ ದಯಪಾಲಿಸಲಿಲ್ಲ ! ವಾರ್ಕ್ ಈಡನ್ನನೂ ಅಹಂಭಾವಿ; ವೂಲ್ಫ ಲಾರೆನ್ಸ್ ರಾಕ್ಷಸಿ; ಇಬ್ಬರಿಗೂ ವಾಸ್ತವ ವ್ಯಕ್ತಿತ್ವವಿಲ್ಲ. ಅಲೌಕಿಕ ಪಾತ್ರಗಳು ವಾಸ್ತವವಾಗಲಾರವು. ಸ್ತ್ರೀ ಪಾತ್ರ ನಿರ್ಮಿತಿಯಲ್ಲಿ ನಮ್ಮ ಲೇಖಕ ಅಷ್ಟು ಯಶಸ್ವಿಯಲ್ಲ.

ಹಿನ್ನೆಲೆ ಹಾಗೂ ವಾತಾವರಣ ನಿರ್ಮಿತಿಯಲ್ಲಿ ನಮ್ಮ ಗ್ರಂಥಕಾರ ಯಶಸ್ವಿ; ಒಂದೊಂದು ಸಲವಂತೂ ಓದುಗನನ್ನು ಮುಗ್ಧನನ್ನಾಗಿಸುವ ಅವನ ನಿರಾಡಂಬರತೆಯೇ ಹಲವು ಸಲ ಅತ್ಯಂತ ಪರಿಣಾಮಕಾರಿಯಾಗುವದು. 'To Build A Fire' ಎಂಬ ಅಮೇರಿಕನ್ ಕತೆ ಇದಕ್ಕೆ ಜೀವಂತ ನಿದರ್ಶನ. ಇಲ್ಲಿ ಕಾಣಬರುವ ಪಾತ್ರಗಳೆಂದರೆ ಮೂರೇ— ಒಬ್ಬ ಮನುಷ್ಯ, ಅವನ ನಾಯಿ, ಧ್ರುವ ಪ್ರದೇಶ. ಹವಾಮಾನ, ನಿಸರ್ಗ, ಮಾನವನ ಲಹರಿ—ಎಲ್ಲವನ್ನು ಲಂಡನ್ ಅತಿ ಪರಿಣಾಮಕಾರಿಯಾಗಿ ನಿರೂಪಿಸುವ. ಇದರಿಂದಲೇ ಓದುಗ ದಂಗಾಗಿ ಹೋಗುತ್ತಾನೆ !

ಲಂಡನ್ನನ ಕತೆಗಳ ವಸ್ತುವಿನ ಬಗೆಗೆ ಈ ಮೊದಲೆ ಸಾಕಷ್ಟು ಹೇಳಿಯಾಗಿದೆ. ತಾತ್ವಿಕತೆಯ ಮೋಹ ಅವನಿಗೆ ಅಸಂಖ್ಯಾತ ವಸ್ತುಗಳನ್ನೊದವಿಸಿಕೊಟ್ಟಿತು. ಪುನಃಪುನಃ ಅವನ್ನೇ ವಸ್ತುಗಳನ್ನಾಗಿಸಿದ್ದನ್ನೂ ನಾವು ಕಾಣುವೆವು. ಅವನ ಬಹುಮುಖ ಅನುಭವ ಬೇಕಾದಷ್ಟು ವಸ್ತುಗಳನ್ನು



ಜಾಕ್ ಲಂಡನ್ ಈತನ ಜೀವನ ಉದ್ವೇಗಕಾರಕ ಅನುಭವಗಳಿಂದೊಡಗೂಡಿದೆ. ತನ್ನ ಹದಿನೈದ ನೆಯ ವಯಸ್ಸಿಗೆ ಅವನು ಸ್ಯಾನ್‌ಫ್ರಾನ್ಸಿಸ್ಕೋ ಉಪಸಾಗರದಿಂದ ಕಪ್ಪೆಚಿಪ್ಪುಗಳನ್ನು ರಾಶಿರಾಶಿ ಯಾಗಿ ತಂದನು. ಅಲಾಸ್ಕಾದಲ್ಲಿ ಬಂಗಾರ ದೊರೆ ವುದೆಂಬ ಸಂಗತಿ ತಿಳಿದುಬಂದಾಗ ಆ ಮೋಹಕ್ಕೂ ಅವನು ಒಳಗಾಗದಿರಲಿಲ್ಲ. ಧ್ರುವ ಪ್ರದೇಶದ ಹಿಮದಲ್ಲಿಯ ಅತಿ ಕಠಿಣ ಜೀವನದ ಅನುಭವವೂ ಅವನಿಗೆ ಲಭಿಸಿತು. ತನ್ನ ಈ ಸಾಹಸೀ ಕೃತಿಗಳ ನ್ನಾಧರಿಸಿಯೇ ಚಿಕ್ಕ ಕತೆಗಳನ್ನು ರಚಿಸಿ, ಇವನು ತೀರ ಪರಿಚಿತ ಹಾಗೂ ಲೋಕಪ್ರಿಯ ಕತೆಗಾರ ನಾಗಿರುವನು. ಆದ್ದರಿಂದ ಎಂದಿಗೂ ಇವನ ಹೆಸರು ಸಾಹಿತ್ಯಾಕಾಶದಲ್ಲಿ ಧ್ರುವತಾರೆಯಾಗಿದೆ.



# ೧. ಆದಿಯುಗದಲ್ಲಿ

ಬಕ್ ವೃತ್ತಪತ್ರಿಕೆ ಓದುತ್ತಿರಲಿಲ್ಲ. ಒಂದು ವೇಳೆ ಆ ರೂಢಿಯಾಗಿದ್ದರೆ, ಉಂಟಾಗುತ್ತಿದ್ದ ಎಲ್ಲ ತೊಂದರೆಗಳ ಅರಿವು ಅದಕ್ಕಾಗುತ್ತಿತ್ತು. ಬರಿ ತನಗಷ್ಟೆ ಏಕೆ? ಪ್ರವಾಹದಲ್ಲಿ ಈಜುವ, ಬಲವಾದ ಸ್ನಾಯುಗಳ, ಉದ್ದೋಉದ್ದ ಬೆಚ್ಚಗಿನ ಕೂದಲಿನ—ಪ್ಯೂಗೆಟ್ ಸೌಂಡಿನಿಂದಾಗಿ ಸ್ಯಾನ್‌ಡಿಗೋವರೆಗಿನ—ಎಲ್ಲ ನಾಯಿಗಳ ವಸ್ತುಸ್ಥಿತಿಯ ಕಲ್ಪನೆ ಸ್ಫುಟವಾಗುವಂತಿತ್ತು. ಮುಖ್ಯ ಬೆಳಕಿಗೆ ಎರವಾದ ಆರ್ಕ್ಟಿಕ್ ಪ್ರದೇಶದಲ್ಲಿ ಸಂಶೋಧನೆಗೆ ಕೈಹಾಕಿದ ಹಲವಾರು ಜನರಿಗೆ ಪೀತ ಧಾತುವೊಂದು ದೊರೆತಿತ್ತು. ಅಲ್ಲದೆ ಉಗಿ ಹಡಗ, ಪರದೇಶದ ಸಾರಿಗೆಯ ಕಂಪನಿಗಳು ಮತ್ತು ಸಾವಿರಾರು ಜನರು ಅವನ್ನು ಪಡೆಯುವ ಉತ್ಕಟಾಭಿಲಾಷೆಯಿಂದ ಉತ್ತರ ಪ್ರದೇಶದೆಡೆ ಅವ್ಯಾಹತವಾಗಿ ಮುನ್ನುಗ್ಗುವದು ನಡೆದಿತ್ತು. ಈ ಜನರಿಗೆ ನಾಯಿಗಳ ಅವಶ್ಯಕತೆ ಅತಿಯಾಗಿತ್ತು. ಹುರಿಕಟ್ಟಿನ ಸ್ನಾಯುಬಲದಿಂದ, ಕಾರ್ಯಕ್ಷಮತೆಗೆ ಹೆಸರಾದ, ತುಪ್ಪಳದ ಆವರಣದ ಮೂಲಕ ಹೆಪ್ಪುಗಟ್ಟಿದ ಮಂಜಿನಲ್ಲಿಯೂ ಸಲೀಸಾಗಿ ಬದುಕಬಲ್ಲ—ನಾಯಿಗಳು ವಿಶೇಷವಾಗಿ ಬೇಕಾಗಿದ್ದವು.

ಸೂರ್ಯ ಚುಂಬಿತ ಸಾಂತಾ ಕ್ಲೇರಾ ಕೊಳ್ಳದಲ್ಲಿಯ ಒಂದು ದೊಡ್ಡ ಮನೆಯಲ್ಲಿ ಬಕ್ ವಾಸಿಸುತ್ತಿತ್ತು. ಆ ಮನೆ ನ್ಯಾಯಾಧೀಶ ಮಿಲ್ಲರರ ಆವಾಸವೆಂದು ಹೆಸರಾಗಿತ್ತು. ಅದು ರಾಜಬೀದಿಗೆ ಸ್ವಲ್ಪ ಒಳಬದಿಗೆ ಇದ್ದು, ಅರ್ಧಮರ್ಧ ಗಿಡಗಳಲ್ಲಿ ಮುಚ್ಚಿಹೋದಂತಾಗಿತ್ತು. ಗಿಡಗಳೊಳಗಿಂದ, ಸುತ್ತುಮುತ್ತಲಿನ ಅದರ ಪ್ರಶಾಂತ ಪಡಸಾಲೆ ಗೋಚರಿಸುತಿತ್ತು. ಆ ಮನೆಗೆ ಹೋಗಲು ನೆಲಗಟ್ಟನೆಯ ಅನೇಕ ಸೀಳುದಾರಿಗಳು. ಅಂಕುಡೊಂಕಾದ ಆ ದಾರಿಗಳ ಎಡಬಲಕ್ಕೆ ಗಗನಚುಂಬಿ ಪಾಪ್ಲರ್ ಗಿಡಗಳನ್ನು ಟೊಂಗೆಗಳು ಒಂದಕ್ಕೊಂದು ತಳಕು ಹಾಕಿ ಶೋಭೆಯನ್ನುಂಟುಮಾಡಿದ್ದವು. ಬೀದಿಯ ಆಚೆಗೆ ಹರವು ಹೆಚ್ಚು. ಹತ್ತು ಹತ್ತರಂತೆ ಚಾಕರರುಳ್ಳ ಅನೇಕ ಅಶ್ವಶಾಲೆಗಳು ಅಲ್ಲಿದ್ದವು. ದ್ರಾಕ್ಷೆಯ ಬಳ್ಳಿಗಳಿಂದ ಆವೃತವಾದ ಗುಡಿಸಲು

ಗಳು ಸಾಲುಸಾಲಾಗಿ ಸೇವಕರಿಗಾಗಿ ಕಟ್ಟಿದಂತಿದ್ದವು. ಅಲ್ಲದೆ ಅಲ್ಲಲ್ಲಿ ದ್ರಾಕ್ಷೆಯ ಮಂಟಪಗಳು, ಹಚ್ಚ ಹಸಿರು ಮುರಿಯುವ ವಿಸ್ತಾರವಾದ ಹುಲ್ಲು ಗಾವಲು, ಎಲೆವಳ್ಳಿ, ಹಣ್ಣಿನ ತೋಟ, ಬೆರಿ ಹಣ್ಣಿನ ಚೌಕುಗಳು. ಬಿಸಿ ನೀರ ಸೆಲೆಯ ಬಾವಿಗಾಗಿ ಅಲ್ಲೊಂದು ಪಂಪು. ಬಳಿಯಲ್ಲಿ ನ್ಯಾಯಾಧೀಶ ಮಿಲ್ಲರರ ಮಕ್ಕಳ ಮುಂಜಾವಿನ ಸ್ನಾನಕ್ಕಾಗಿ ಸಿಮೆಂಟ ಕೆರೆ. ಅದರಿಂದ ಮಧ್ಯಾಹ್ನದ ಬಿಸಿಲೂ ಕೂಡ ತಂಪೆನಿಸುವಂತಿತ್ತು.

ಈ ರಾಜ್ಯದ ಆಧಿಪತ್ಯ ಬಕ್‌ನದು. ಅದು ಹುಟ್ಟಿದುದು ಇಲ್ಲಿಯೇ; ಜೀವನದ ನಾಲ್ಕು ವರುಷ ಗತಿಸಿದುದೂ ಇಲ್ಲಿಯೇ. ಅಲ್ಲಿ ಇದಲ್ಲದೆ ಬೇರೆ ನಾಯಿಗಳೂ ಇದ್ದುದೇನೊ ನಿಜ. ಇಷ್ಟೊಂದು ವಿಶಾಲವಾದ ಪ್ರದೇಶದಲ್ಲಿ ಬೇರೆ ಬೇರೆ ಜಾತಿಯ ನಾಯಿಗಳಿರದೆ ಇರಲು ಸಾಧ್ಯವೆ? ಆದರೆ ಅವು ಇದ್ದೂ ಇಲ್ಲದಂತೆ! ಅವು ಬಂದವು, ಹೋದವು; ಅಷ್ಟೆ. ಜಪಾನಿನ ಪಗ್ ನಾಯಿ ಯಂತೆ, ಇಲ್ಲವೆ ಹೊರಗೆ ಮುಖವನ್ನೇ ತೋರಿಸದ, ನೆಲಕ್ಕೂ ಕಾಲು ಹಚ್ಚದ, ಕೂದಲಿಲ್ಲದ ಮೆಕ್ಸಿಕನ್ ನಾಯಿಯಂತೆ ಎಷ್ಟೊ ನಾಯಿಗಳು ತಮಗಾಗಿ ಕಟ್ಟಿಸಿದ ಚಿಕ್ಕ ಮನೆಗಳಲ್ಲಿಯೊ ಅಥವಾ ಒಡೆಯನ ಭವ್ಯ ಕಟ್ಟಡದ ಕತ್ತ ಲೆಯ ಮೂಲೆಯಲ್ಲಿಯೊ ವಾಸಿಸಿದ್ದವು. ತದ್ವಿರುದ್ಧ ತೋಳದಂತಹ ಹದಿ ನೆಂಟು ಇಪ್ಪತ್ತು ನಾಯಿಗಳೂ ಅಲ್ಲಿದ್ದವು. ಒಕ್ಕಲುಗಿತ್ತಿಯರ ಕಸಬರಿಗೆ ಬರಲುಗಳ ಆಧೀನವಾದ–ಟೂಟ್ ಸಾಬೆಲ್–ನಾಯಿಗಳೆಡೆಗೆ ಒವ್ ಎಂದು ಬೊಗಳಿ ಏನೊ ಕಿವಿಮಾತು ಹೇಳುವದು ಇವುಗಳ ಕೆಲಸ.

ಆದರೆ ಬಕ್, ಮನೆಯ ನಾಯಿಯೂ ಅಲ್ಲ; ಕೊಟ್ಟಿಗೆಯದೂ ಅಲ್ಲ. ಅಖಂಡ ಈ ಭೂಪ್ರದೇಶವೇ ಅದರದು! ಒಮ್ಮೊಮ್ಮೆ ಈಜುಗೊಳದಲ್ಲಿ ಮುಣುಗು ಹಾಕುತ್ತಿತ್ತು. ಇಲ್ಲವೆ ನ್ಯಾಯಾಧೀಶನ ಮಕ್ಕಳೊಡನೆ ಬೇಟೆಗೆ ಹೊರಡುವದೂ ಅದಕ್ಕೆ ರೂಢಿ. ಹೂಬಿಸಿಲು ಬಿದ್ದಾಗ ಅಥವಾ ಚುಮು ಚುಮು ನಸುಕಿನಲ್ಲಿ ನ್ಯಾಯಾಧೀಶನ ಹೆಣ್ಣುಮಕ್ಕಳಾದ ಮೋಲಿ, ಅಲೈಸರ ವೈಗಾವಲಾಗಿ ಹೋಗುವದು ಅದರ ಪರಿಪಾಠ. ಚಳಿಗಾಲದ ಇರುಳು ಅದು ನ್ಯಾಯಾಧೀಶನ ಓದುವ ಕೊಠಡಿಯಲ್ಲಿ ಛಿಳಿಛಿಟಿ ಹಾರುವ ಬೆಂಕಿಯ ಹತ್ತರ ಒಡೆಯನ ಪಾದದೆಡೆಗೆ ಕೂಡುವ ಚಟ ಅದಕ್ಕೆ. ನ್ಯಾಯಾಧೀಶನ ಮೊಮ್ಮಕ್ಕಳನ್ನು ಒಮ್ಮೊಮ್ಮೆ ಬೆನ್ನಮೇಲೆ ಹತ್ತಿಸಿಕೊಂಡು ಹೋಗಿ ಹುಲ್ಲು

ಗಾವಲಿನಲ್ಲಿ ಹೊರಳಾಡಿಸುತ್ತಿತ್ತು. ಅಶ್ವಶಾಲೆಯ ಬದಿಯಲ್ಲಿಯ ಕಾರಂಜಿಯ ಹತ್ತರಾಗಲಿ, ತೋಟಪಟ್ಟಿ, ಹಾಗೂ ಅಡವಿಯ ಅಂಚಿಗಾಗಲಿ ಹೋದಾಗ ಅಪಾಯವಾಗದಂತೆ ನೋಡಿಕೊಳ್ಳುವದೂ ಅದರ ಹೊಣೆ. ಮೆಕ್ಸಿ ನಾಯಿಗಳಲ್ಲಿ ಅದಕ್ಕೆ ವಿಶೇಷ ಗೌರವ. ಟೂಟ್, ಸಾಬೆಲ್ ನಾಯಿಗಳನ್ನು ಅದು ಲೆಕ್ಕಿಸುತ್ತಿರಲೇ ಇಲ್ಲ. ನ್ಯಾಯಾಧೀಶ ಮಿಲ್ಲರರ ಆ ಸ್ಥಳದಲ್ಲಿ—ಸರಿದಾಡುವ, ಅಲೆದಾಡುವ, ಹಾರಾಡುವ ಯಾವ ಪ್ರಾಣಿಗಳ ಮೇಲೂ ಅದರದು ಅಪೂರ್ವ ನಿರಂತರ ಪ್ರಭಾವ.

ಅದರ ತಂದೆ, ಎಲ್ಮೊ, ಒಂದು ದೊಡ್ಡ ಸೊಣಗ–ಸೇಂಟ್ ಬರ್ನಾರ್ಡ ನಾಯಿ—ನ್ಯಾಯಾಧೀಶನ ಜೀವನ ಸಂಗಾತಿ. ಅದರ ತಾಯಿ–ಶೆಫ್ ಸ್ಕಾಚ್ ಕುರುಬರ ನಾಯಿ. ಬಕ್ ತಂದೆಯ ರೀತಿಯನ್ನೆ ಅನುಸರಿಸುತ್ತಿತ್ತು. ಅದು ಆಕಾರಮಾನದಿಂದ ತಂದೆಯಷ್ಟು ದೊಡ್ಡದಿರಲಿಲ್ಲ. ಅದರ ತೂಕ ಕೇವಲ ನೂರಾ ನಲವತ್ತು ಪೌಂಡು. ಇಂಥ ಗಾತ್ರವನ್ನು ತೂಗುವದೆಂದರೆ ಸಾಮಾನ್ಯ ಸಂಗತಿಯೇನಲ್ಲ. ಅಷ್ಟರಿಂದಲೆ ಬಕ್ ಎಲ್ಲೆಡೆಯಿಂದ ಪ್ರಶಂಸೆ ಹೊಂದಿ ರಾಜಠೀವಿಯಲ್ಲಿ ಮೆರೆಯುತ್ತಿತ್ತು. ಬಾಲ್ಯಾವಸ್ಥೆಯ ಈ ನಾಲ್ಕು ವರುಷಗಳ ಕಾಲಾವಧಿಯಲ್ಲಿ ಅದು ವೈಭವಶಾಲಿ ಜೀವನ ಬಾಳಿತ್ತು. ಹಳ್ಳಿಯಲ್ಲಿ ವಾಸಿಸಿದ ಹಲವು ಸಿರಿವಂತ ಸದ್ಗೃಹಸ್ಥರಂತೆ ಅದಕ್ಕೂ ಸಾಕಷ್ಟು ಗರ್ವವಿತ್ತು. ಆದರೆ ಅದು ಕೇವಲ ಅಚ್ಚೆಯ, ಮನೆಯ ಸಾಕು ನಾಯಿಯಂತೆ ಕೂಳಿಗೆ ಮೂಲವಾಗಿ ಬೆಳೆದ ಜೀವನವನ್ನು ನಡೆಸಲಿಲ್ಲ. ಬೇಟೆಗೆ ಹೊರಡುವದು ಹಾಗೂ ಬಂಧು–ಬಳಗದವರೊಡನೆ ಚಕ್ಕಂದದಿಂದಾಡುವದರ ಮೂಲಕ ಬಕ್ ಬಹಳ ಮೈ ಹಿಡಿದಿತ್ತು; ಗಟ್ಟಿಮುಟ್ಟಾಗಿತ್ತು. ಸ್ನಾಯುಗಳು ಬಲಶಾಲಿಯಾಗಿದ್ದವು. ಅಲ್ಲದೆ ಟಬ್ಬಿನಲ್ಲಿಯ ನೀರಿನಲ್ಲಿ ಸ್ನಾನವೆಂದರೆ ಅದಕ್ಕೆ ಪಂಚಪ್ರಾಣ !

ಇಷ್ಟೆಲ್ಲ ರೀತಿಯಿಂದ ಬೆಳೆದುಬಂದು ಈ ಬಕ್ ನಾಯಿಗೆ ೧೮೯೭ ರಲ್ಲಿ ಕ್ಲೊನ್‌ಡೈಕ ಸತ್ಯಾಗ್ರಹದ ಮೂಲಕ ಹಿಮಾಚ್ಛಾದಿತ ಉತ್ತರ ಪ್ರದೇಶದಲ್ಲಿ ಅವನತಿ ಉಂಟಾದುದು ಹೀಗೆ: ಆದರೇನು ? ಬಕ್ ವೃತ್ತಪತ್ರಿಕೆ ಓದಿರಲಿಲ್ಲ. ತೋಟಿಗನ ಸಹಾಯಕರಲ್ಲೊಬ್ಬನಾದ ಮ್ಯಾನುಯೆಲ್ಲನ ಅಪಾಯಕಾರಕ ಗೆಳೆತನವೂ ಸಾಧಿಸಬಾರದಿತ್ತು. ಅವನದೊಂದು ದೊಡ್ಡ ದೋಷವೆಂದರೆ ಚೀನಿ

ಲಾಟರಿಗಾಗಿ ಅವನಿಗಿರುವ ಅತ್ಯಾಸೆ. ಜೂಜಾಡತೊಡಗಿದನೆಂದರೆ ಅಲ್ಲಿ ಸಹ ಒಂದು ಕ್ರಮಬದ್ಧತೆ. ಅಂತೇ ಅವನಿಗೆ ಅವನತಿ ಕಾದು ಕುಳಿತಂತಾಗಿತ್ತು. ಬಿಟ್ಟೂಬಿಡದೆ ಜೂಜಿನಲ್ಲಿ ಭಾಗವಹಿಸಬೇಕೆಂದರೆ ನೀರಿನಂತೆ ಹಣ ಸುರಿಯಬೇಕು. ಪಾಪ ! ಮ್ಯಾನುಯೆಲ್ ಬಡ ತೋಟಗರಿಗೆ ಸಹಾಯಕ ! ಬರುವ ಕೂಲಿ ಎಷ್ಟು ? ಅಷ್ಟರಲ್ಲಿ ಅಸಂಖ್ಯಾತ ಮಕ್ಕಳುಮರಿ, ಹೆಂಡತಿಯ ಹೊಟ್ಟೆ ಸಾಗಬೇಕು.

ನ್ಯಾಯ್ಯಾಧೀಶನ ಕಾಳಿನ ಸಂಸ್ಥೆಯ ಸಾಧಾರಣ ಸಭೆ ಕೂಡಿತ್ತು ಅಂದು. ಹುಡುಗರು ತಮ್ಮ ಆಟದ ಕ್ಲಬ್ಬಿನ ಸಂಘಟನೆಯಲ್ಲಿ ತಾದಾತ್ಮ್ಯ ತಳೆದಿದ್ದರು. ಆ ರಾತ್ರಿಯೆ ಮ್ಯಾನುಯೆಲ್ ತನ್ನ ಕಾರಸ್ಥಾನದಲ್ಲಿ ವಿಜಯಿಯಾದುದು. ಅವನು ಹಾಗೂ ಬಕ್ ತೋಟದೊಳಗಿಂದ ಹಾಯ್ದು ಹೋದದ್ದು ಯಾರಿಗೂ ತಿಳಿದಿರಲಿಲ್ಲ. ಸ್ವತಃ ಬಕ್, ತಾನು ಅಲೆದಾಡಲು ಹೋಗುವೆನೆಂದು ಗ್ರಹಿಸಿತ್ತು. ಅವನು ಬಕ್‌ನೊಡನೆ ಕಾಲೇಜ ಉದ್ಯಾನದ ಬಳಿಯ ಧ್ವಜ ನಿಲ್ದಾಣದ ಹತ್ತಿರದಿಂದ ಬರುವದನ್ನು ಒಬ್ಬನೇ ಒಬ್ಬ ಕಂಡಿದ್ದ. ಮ್ಯಾನುಯೆಲ್ಲನೊಡನೆ ಇವನ ಮಾತು ನಡೆದವು. ಹಣದ ವ್ಯವಹಾರವು ಕ್ಷಣಾರ್ಧದಲ್ಲಿ ಸಮಾಪ್ತವಾಯ್ತು.

'ಮಾಲು ಹಸ್ತಗತವಾಗುವವರೆಗೆ ಅದರ ಪ್ಯಾಕ್ ಸರಿಯಾಗಿರಲಿ' ಎಂದು ಆ ಅಪರಿಚಿತ ಕರ್ಕಶ ಸ್ವರದಲ್ಲಿ ನುಡಿದ. ಮ್ಯಾನುಯೆಲ್ ನಾಯಿಯ ಕೊರಳ ಕಾಲರ್ ಕೆಳಗೆ ಗಟ್ಟಿಮುಟ್ಟಾದ ಹಗ್ಗ ಬಿಗಿದ.

ಹೆಚ್ಚು ಬಿಗಿದಂತೆ ಉಸಿರು ಕಟ್ಟುವದೆಂದು ಮ್ಯಾನುಯೆಲ್ ಹೇಳಿದಾಗ ಅಪರಿಚಿತ ಹೌದೆಂದು ತಲೆ ಹಾಕಿದ.

ಶಾಂತ ರೀತಿಯಲ್ಲಿ, ತನ್ನ ವೈಭವಶಾಲಿ ಠೀವಿಯಲ್ಲಿ, ಬಕ್ ಕೊರಳಿಗೆ ಹಗ್ಗ ಬಿಗಿಸಿಕೊಂಡಿತು. ನಿಜವಾಗಿಯೂ ಇದು ಅದಕ್ಕೆ ಬೇಡವಾಗಿತ್ತು. ಆದರೆ ತನ್ನ ಜನರಲ್ಲಿ ಒಮ್ಮೆ ವಿಶ್ವಾಸವಿಟ್ಟಿತೆಂದರೆ ಸಾಕು, ಅದು ಯಾವ ಅನ್ಯಾಯಕ್ಕೂ ತಲೆವಾಗಿಸುತ್ತಿತ್ತು. ಆದರೆ ಹಗ್ಗದ ತುದಿ ಅಪರಿಚಿತನ ಕೈಸೇರಿದಾಗ ಅದಕ್ಕೆ ಸಿಟ್ಟು ತಡೆಯದಾಗಿ ಗುರುಗುಟ್ಟತೊಡಗಿತು. ತನಗೆ ಸರಿಬಾರದ ಕಾರ್ಯವಿದು ಎಂದು ಸೂಚಿಸಿತು ಅಷ್ಟೇ. ಈ ಸೂಚನೆಯೇ ಒಂದು ಆಜ್ಞೆ—ಅದರ ರಾಜಠೀವಿಯಲ್ಲಿ! ಆದರೆ ಹಗ್ಗ ಕೊರಳು ಕೊರೆಯುತ್ತ

ಉಸಿರುಕಟ್ಟಿಸತೊಡಗಿದೊಡನೆ ಅದರ ಸಹನೆಗೆ ಮಿತಿ ಉಳಿಯಲಿಲ್ಲ. ಸಂತಾಪ ದಿಂದ ಆ ಮನುಷ್ಯನೆಡೆಗೆ ಟಣ್ಣನೆ ಹಾರಿ ಗಂಟಲು ಹಿಡಿದು ಕೆಳಗೆ ಉರುಳಿಸಿ ಬಿಟ್ಟಿತು. ಸಿಟ್ಟಿನಲ್ಲಿ ಬಕ್ ಕುದಿಯತೊಡಗಿರುವಾಗ ಕೊರಳ ಹಗ್ಗ ಇನ್ನೂ ಬಿಗಿಯಾಗತೊಡಗಿತು. ಅದಕ್ಕೆ ದಯೆ ಮಾಯೆ ಎಲ್ಲಿಯದು ? ನಾಲಗೆ ಹೊರಗೆ ಜೋತಾಡಿ, ದೇಹಾದ್ಯಂತ ಒಂದೇ ಸವನೆ ತೇಕುತ್ತಿತ್ತು. ಅದರ ಜೀವನದ ಇಷ್ಟುಕಾಲ ಇಂತಹ ಯಮಯಾತನೆ ಎಂದೂ ಆಗಿರಲಿಲ್ಲ. ಸಿಟ್ಟೊ ಈ ಎಲ್ಲೆ ದಾಟಿರಲಿಲ್ಲ. ಆದರೆ ಅದರ ಶಕ್ತಿ ಕುಂದಿತು. ಕಣ್ಣು ಮಿಂಚಹತ್ತಿ ದವು. ಗಾಡಿಯು ಬಂದು, ತನ್ನನ್ನು ಅದರ ಒಳಗೆ ಹಾಕಿದಾಗ ಅದಕ್ಕೆ ಯಾವ ಪ್ರಜ್ಞೆಯೇ ಇರಲಿಲ್ಲ.

ಮುಂದೆ ಅಸ್ಪಷ್ಟವಾಗಿ ಅದಕ್ಕೆ ತಿಳಿದುದೆಂದರೆ ತನ್ನ ನಾಲಗೆಗೆ ವೇದನೆ ಯಾದುದು; ಯಾವುದೊ ವಾಹನದಲ್ಲಿ ತನಗೆ ಧಡಕಿಯಾದುದು. ಎಂಜಿನ್ನಿನ ಕರ್ಕಶ ಸಿಳ್ಳು ಕೇಳಿಸಿದಾಗ ತಾನೆಲ್ಲಿರುವೆನೆಂಬುದರ ಅರಿವಾಗತೊಡಗಿತು. ನ್ಯಾಯಾಧೀಶನ ಮಕ್ಕಳೊಡನೆ ತನಗೆ ಅಲೆದಾಟದ ಕಲ್ಪನೆ ಬಂದಿದ್ದರೂ ವಾಹನದ ಪ್ರವಾಸದ ಅನುಭವ ದೊರೆತಿರಲಿಲ್ಲ. ಅದು ಕಣ್ದೆರೆಯಿತು. ಕಣ್ಣಲ್ಲಿ ಸಿಟ್ಟಿನ ಆವೇಶ ವ್ಯಕ್ತವಾದರೂ ಅಪಹೃತ ಅರಸನ ಗತಿ ಅದಕ್ಕಾಗಿತ್ತು ! ಆ ಮನುಷ್ಯ ಅದರ ಗಂಟಲಿಗೆ ಕೈಹಾಕಲು ಹವಣಿಸಿದ. ಆದರೆ ಬಕ್ ಅತಿ ಚಾಣಾಕ್ಷ ! ದವಡಿಯ ಹಲ್ಲಿನಿಂದ ಅದೇ ಕ್ರೂರ ಕೈಗೆ ಕಡಿದರೆ ಮೂರ್ಛೆ ತಿಳಿದೇಳುವದೆ ಪ್ರಯಾಸವಾಯ್ತು ಅವನಿಗೆ.

‘ ಈ ನಾಯಿಗೆ ರೋಗವಿದೆ ’ ಎನ್ನುತ್ತ ಗಾಯದ ಕೈ ಮುಚ್ಚಿಕೊಂಡು ಗೆಳೆಯನಿಗೆ ಹೇಳಿದ. ಈರ್ವರ ಹೋರಾಟದ ಗದ್ದಲದೆಡೆಗೆ ಅವನ ಲಕ್ಷ್ಯ ಸೆಳೆದಂತಾಗಿತ್ತು. ‘ಫ್ರಿಸ್ಕೊದಲ್ಲಿಯ ನನ್ನ ಒಡೆಯನ ಬಳಿಗೆ ಇದನ್ನೊಯ್ದು ಡಾಕ್ಟರರಿಂದ ಇದರ ಚಿಕಿತ್ಸೆ ನಡೆಯಿಸುವದವಶ್ಯ’—ಎಂದು ಮಾತನಾಡಿದ.

ಆ ಇರುಳು ಪ್ರವಾಸ ಸಮಾಧಾನಕರವಾಯ್ತೆಂದು ಆ ಮನುಷ್ಯ ಸ್ಯಾನ್‌ಫ್ರಾನ್ಸಿಸ್ಕೋದ ಸಾರ್ವಜನಿಕ ಕೊಠಡಿಯಲ್ಲಿ ತನ್ನಷ್ಟಕ್ಕೆ ತಾನೆ ಗೊಣಗಿಕೊಂಡ.

ನಗದು ಸಾವಿರದ ವ್ಯವಹಾರವಾದರೇನಾಯ್ತು ? ನನಗೆ ಸಿಗುವದು ಇದರಲ್ಲಿ ಐವತ್ತೇ ಅಲ್ಲವೆ ?—ಎಂದೂ ಅವನು ಗುಣುಗುಟ್ಟಿದ.

ಗಾಯದ ಕೈಗೆ ಕರವಸ್ತ್ರ ಸುತ್ತಿದ. ಬಲಗಾಲು ನಾಯಿಯ ಕಡಿತಕ್ಕೆ ಸೀಳಿದಂತಾಗಿತ್ತು.

'ಮತ್ತೊಬ್ಬನಿಗೆ ಸಿಕ್ಕದ್ದೆಷ್ಟು ?' ಎಂದು ಪ್ರಯಾಣಿಕರ ಕೊಠಡಿಯ ಒಡೆಯ ಕೇಳಿದ.

' ನೂರು ' ಎಂದು ಉತ್ತರ ಬಂದಿತು.

'ಈ ಸಾಹಸಕ್ಕೆ ಒಟ್ಟು ನೂರಾ ಐವತ್ತೆಂದರೆ ಏನೂ ಪರವಾ ಇಲ್ಲ' ಎಂದು ಸಲೂನಿನ ಒಡೆಯ ಲೆಕ್ಕಹಾಕಿ ಉಸಿರಿದ.

ನಾಯಿಯನ್ನು ಕದ್ದು ತಂದವ, ಕೈಯ್ಯ ಅರಿವೆ ಬಿಚ್ಚಿ ಗಾಯ ಪರೀಕ್ಷಿಸಿದ. ' ಹೈಡ್ರೊ ಫೋಬಿ ನನಗೆ ದೊರೆಯದಿದ್ದರೆ—'

' ಕೊಲೆಗಡಕನೆಂದು ನಿನ್ನ ಗತಿ ಹೀಗೆ ' ಸಲೂನಿನೊಡೆಯ ನಕ್ಕ. ಹಣಸಿಗುವ ಮೊದಲು ಕೈಕುಲುಕಿಸುವಾ, ಬಾ ಎಂದ.

ಗಂಟಲಿಗೆ, ನಾಲಗೆಗೆ ಅಸಹನೀಯ ನೋವಾಗಿ, ಅರ್ಧ ಜೀವವೇ ಹಾರಿದಂತೆನಿಸಲು ಬಕ್ ತನಗೆ ಯಾತನೆ ಕೊಡುವವರನ್ನೆದುರಿಸಲು ಹವಣಿಸಿತು. ಅಷ್ಟರಲ್ಲಿಯೆ ಅದನ್ನು ಕೆಳಗೆ ಕೆಡವಿ ಉಸಿರುಗಟ್ಟುವಂತೆ ಹಿತ್ತಾಳಿಯ ಕಾಲರನ್ನು ಕೊರಳಿಗೆ ಬಿಗಿಸಿದರು. ಹಗ್ಗ ಬಿಚ್ಚಿ ಪಂಜರದಲ್ಲಿ ಚಲ್ಲಿ ಕೊಟ್ಟರು.

ಆ ದುಃಖಮಯವಾದ ಇರುಳನ್ನು ಅದು ಸಿಟ್ಟಿನಲ್ಲಿ ಕುದಿಯುತ್ತಲೇ ಕಳೆಯಿತು. ಇದೆಲ್ಲದರ ರಹಸ್ಯವೇ ಅರ್ಥವಾಗಲಿಲ್ಲ ಅದಕ್ಕೆ. ಈ ವಿಲಕ್ಷಣ ಜನ ತನಗೆ ಏನು ಮಾಡುವವರಿದ್ದಾರೆಂಬುದು ಹೊಳೆಯಲಿಲ್ಲ. ಮುಂಬರುವ ಆಪತ್ತಿಗಾಗಿ ಈಗಲೇ ತಾನೇಕೆ ಹೌಹಾರಿದೆ ಇಷ್ಟು—ಎಂದು ಅದಕ್ಕೆ ತಿಳಿಯಲಿಲ್ಲ. ಇಡಿ ರಾತ್ರಿ ಅನೇಕ ಸಲ ಅದು ಹಾರಿ ಹಾರಿ ಬಿದ್ದಿತು. ಕಣ್ತೆರೆದು ಆತುರತೆಯಿಂದ ನೋಡಿತು— ನ್ಯಾಯಾಧೀಶನಾಗಲಿ, ಅವನ ಮಕ್ಕಳಾಗಲಿ ಬಂದು ತನ್ನನ್ನು ಮುದ್ದಿಟ್ಟಾರೆಂದು ! ಆದರೆ ಕಿರ್ರೆಂದು ಸದ್ದಾಗಿ ಬಾಗಿಲು ತೆಗೆದಾಗೊಮ್ಮೆ ಮೇಣಬತ್ತಿಯ ಮಂದ ಬೆಳಕಿನಲ್ಲಿ ಸಲೂನಿನೊಡೆಯ ಮಾತ್ರ ಬಂದು ಇಣಕಿ ನೋಡಿ ಹೋಗುತ್ತಿದ್ದ. ಉನ್ಮಾದದಿಂದ ಬೊಗಳಬೇಕೆಂದು ಹಾತೊರೆವಾಗ, ಬೇಡಾದ ವ್ಯಕ್ತಿ ಕಂಡಾಗೊಮ್ಮೆ ಅದಕ್ಕೆ ಸೇಡಿನಿಂದ ಗುರ‍್ರೆನ್ನದೆ ವಿಧಿ ಇರಲಿಲ್ಲ.

ಆದರೆ ಸಲೂನಿನೊಡೆಯ ಅದರ ಗೊಡವೆಗೆ ಹೋಗಲಿಲ್ಲ. ಮುಂಜಾವು ಬೇರೆ ನಾಲ್ಕು ಜನ ಬಂದು ಪಂಜರದಿಂದ ಅವನ್ನು ಹೊರತೆಗೆದರು. ಅವರ ಅಸಹ್ಯಾಕೃತಿ, ಕ್ರೂರ ಮುಖಮುದ್ರೆ ಕಂಡು ಬಕ್, ತನ್ನನ್ನು ಮತ್ತೆ ಪೀಡಿಸಲು ಹೊಸಬರು ಬಂದರಲ್ಲಾ—ಎಂದು ಒಳಒಳಗೆ ಮರುಗಿತು. ಸಲಾಕಿಯ ಒಳಗಿದ್ದೇ ಒವ್ ಒವ್ ಎಂದು ಬೊಗಳಿತು. ಅವರು ಬರಿ ನಕ್ಕು ಸಲಾಕಿಯೊಳಗಿಂದ ಕೋಲು ಚುಚ್ಚಿದರು. ಸಿಟ್ಟು ತೋರಿಸಲು ಹಲ್ಲಿನಿಂದ ಸಲಾಕಿಗೆ ವ್ಯರ್ಥ ಕಡಿಯಿತು, ಬಕ್. ಪಂಜರ ಸಹಿತ ಅದನ್ನು ವ್ಯಾಗನ್ನಿಗೆ ಸ್ಥಳಾಂತರಿಸಲಾಯಿತು. ಅನೇಕ ಜನರ ಹಸ್ತಾಂತರಕ್ಕೊಳಗಾಗಿ ಅದರ ಪ್ರವಾಸ ಮುಂದರಿಯಿತು. ಎಕ್ಸಪ್ರೆಸ್ ಕಚೇರಿಯಲ್ಲಿಯ ಕಾರಕೂನರು ಅದನ್ನು ತಮ್ಮ ವಶಕ್ಕೆ ತೆಗೆದುಕೊಂಡರು. ಚಕ್ಕಡಿಯ ಮೂಲಕ ಮತ್ತೊಂದು ವ್ಯಾಗನ್ನಿಗೆ ರವಾನಿಸಿದರು. ಒಂದು ಟ್ರಕ್ ಬಂದು ಇನ್ನೆಷ್ಟೋ ವಸ್ತುಗಳೊಡನೆ ಇದನ್ನು ಉಗಿ ಹಡಗದೆಡೆ ಒಯ್ದಿತು. ಅಲ್ಲಿಂದ ರೇಲ್ವೆ ಡಿಪೊ. ಕೊನೆಗೆ ಎಕ್ಸಪ್ರೆಸ್ ಕಾರಿನಲ್ಲಿ ಅದನ್ನಿಟ್ಟರು.

ಎರಡು ರಾತ್ರಿ ಇನ್ನೆಷ್ಟೋ ಇಂತಹ ಭಾರಗಳನ್ನು ಎಂಜಿನ್ ಎಳೆಯಿತು. ಎರಡು ಹಗಲು, ಎರಡು ಇರುಳು ನಾಯಿಗೆ ತಿನ್ನಲು, ಕುಡಿಯಲು ಏನೂ ಸಿಗಲಿಲ್ಲ. ಎಕ್ಸಪ್ರೆಸ್ ಸುದ್ದಿಗಾರರನ್ನು ಕಂಡೊಡನೆ ಅದು ಬೊಗಳುತ್ತಿತ್ತು. ಉಪದ್ರವ ಕೊಡುವದೆ ಅವರ ಸೇಡಿನ ವಿಧಾನ. ಸಲಾಕಿಗೆ ಕಡಿಯಲು ಅದು ಜಿಗಿದಾಗ ಜನರು ಅಪಹಾಸ್ಯದಿಂದ ಚುಚ್ಚಿ ನುಡಿಯುತ್ತಿದ್ದರು. ಅವರೂ ಅದರಂತೆ ಒದರಿ, ಕೇಕೆ ಹಾಕಿ ಸುತ್ತುಗಟ್ಟುತ್ತಿದ್ದರು. ಇದೆಂಥ ಹುಚ್ಚಾಟ ಎಂದು ನಾಯಿಗೆ ತಿಳಿಯುತ್ತಿತ್ತು. ಅಂತೇ ಅಭಿಮಾನಕ್ಕೆ ಬರೆ ಹಾಕಿದಂತಾಗುತ್ತಿತ್ತು ಅದಕ್ಕೆ. ಹೀಗೆ ಸಿಟ್ಟು ಎಲ್ಲೆ ಮೀರಿ ಉಕ್ಕುತ್ತಿತ್ತು. ಹಸಿವೆಯನ್ನೇನು ಅದು ಲೆಕ್ಕಿಸುತ್ತಿರಲಿಲ್ಲ. ಆದರೆ ನೀರು ಸಿಗದ್ದರಿಂದ ಅದರ ಸಿಟ್ಟು ಹೆಚ್ಚಿ ಕಾಯಿಲೆಯಾದಂತೆನಿಸಿತು. ಅದನ್ನು ಕೆಣಕುವವರ ಅತ್ಯಾಚಾರವೇ ಇವಕ್ಕೆಲ್ಲ ಮೂಲ. ಗಂಟಲು, ನಾಲಗೆ ಉಬ್ಬಿ ಹುರಪಳಿಸಿದಂತಾಗಿದ್ದವು.

ಒಂದು ಸಂಗತಿ ಅದಕ್ಕೆ ಆನಂದ ಉಂಟುಮಾಡಿತು. ಕೊರಳಿನ ಬಿಗಿದ ಹಗ್ಗ ಮಾತ್ರ ಬಿಚ್ಚಲಾಗಿತ್ತು. ಇನ್ನೇನು? ಎಲ್ಲರನ್ನು ಒಂದು ಕೈ ನೋಡುವೆನೆಂದು ಅದು ಎಣಿಸಿತು. ಇನ್ನೊಂದು ಹಗ್ಗವನ್ನು ಕಟ್ಟುವದು ಸಾಧ್ಯವೇ

ಇರಲಿಲ್ಲವೆಂದು ಅದರ ತಿಳುವಳಿಕೆಯಾಗಿತ್ತು. ಎರಡು ಹಗಲು, ಎರಡು ಇರುಳು ಕೂಳು ನೀರು ವರ್ಜ್ಯವಾದದ್ದರಿಂದ ಸಿಟ್ಟಿಲ್ಲ ಒಬ್ಬೊಳಿಯಾಗುತ್ತ ನಡೆಯಿತು. ಅದರ ಕಣ್ಣು ಕೆಂಪಡರಿದವು. ರಾಕ್ಷಸನ ಅಪರಾವತಾರ ತಳೆಯಿತು. ನ್ಯಾಯಾಧೀಶನೇ ಬಂದು ನೋಡಿದ್ದರೂ ಇದು ತಮ್ಮ ಬಕ್ ಎಂದು ಗುರುತಿಸುವಂತಿರಲಿಲ್ಲ. ಗಾಡಿಯಿಂದ ಅದು ಸ್ಥಳಾಂತರಿತವಾದಾಗ ಎಕ್ಸಪ್ರೆಸ್ ಸುದ್ದಿಗಾರರಿಗೂ ಒಂದು ತೊಂದರೆಯು ನಿವಾರಣೆಯಾದಂತೆನಿಸಿ ಅವರು ಸಮಾಧಾನದ ಉಸಿರುಗರೆದರು.

ನಾಲ್ವರು ಒದ್ದಾಡುತ್ತ ಆ ಪಂಜರವನ್ನು ವ್ಯಾಗೀನಿನಿಂದ ಇಳಿಸಿ ಎತ್ತರ ಗೋಡೆಯುಳ್ಳ ಚಿಕ್ಕ ಹಿತ್ತಲಿಗೆ ಒಯ್ದರು. ಕೆಂಪು ಸ್ವೆಟರ ಧರಿಸಿದ ಧಷ್ಟಪುಷ್ಟ ಮನುಷ್ಯನೊಬ್ಬ ಡ್ರಾಯವ್ಹರನಿಗೆ ಸನ್ನೆ ಮಾಡಿದ. ತನಗೆ ಪೀಡಿಸಲು ಮತ್ತೊಬ್ಬ ಬಂದನೆಂದು ಸಿಟ್ಟಿನಿಂದ ಬಕ್ ಟಣ್ಣನೆ ಸಲಾಕಿಗೆ ಜಿಗಿಯಿತು. ಆ ಮನುಷ್ಯ ವಿಕಟವಾಗಿ ನಕ್ಕು ಕೈಬಾಚಿ, ಟೊಣಪಿ ತಂದನು.

'ಅದನ್ನೀಗ ಹೊರಗೆ ತೆಗೆಯುವದಿಲ್ಲವೆ?' ಎಂದು ಡ್ರಾಯವ್ಹರ ಕೇಳಿದ.

'ತೆಗೆಯುವದಿದೆ' ಎಂದು ಮರು ನುಡಿದು ಕೈ ಬಾಚಿಯನ್ನು ಪಂಜರದೊಳಗೆ ಚುಚ್ಚಿದ—ವಿಚಾರಣೆಗೋಸುಗ.

ಕೂಡಲೆ, ಪಂಜರ ಹೊತ್ತ ಆ ನಾಲ್ಕು ಜನರು ಚಲ್ಲಾಪಿಲ್ಲಿಯಾಗಿ ಈ ಪ್ರಾಣಿಯ ಮೋಜಿನಾಟ ನೋಡಬೇಕೆಂದು ಸುರಕ್ಷಿತ ಸ್ಥಳ ಹಿಡಿದು ನಿಂತುಕೊಂಡರು.

ಬಕ್ ರಭಸದಿಂದ ಮುನ್ನುಗ್ಗಿ ಬಾಚಿಯನ್ನು ಹಲ್ಲಿನಿಂದ ಕಡಿಯುತ್ತ ಅವರೊಡನೆ ಹೋರಾಟ ನಡೆಸಿತು. ಬಾಚಿ ಹೋದಲ್ಲೆಲ್ಲ ನಾಯಿ ನುಗ್ಗುತ್ತಿತ್ತು; ಗುರುಗುಟ್ಟುತ್ತಿತ್ತು. ಅದನ್ನು ಹೊರಗೆ ತೆಗೆಯುವ ದಾರಿ ಹುಡುಕುವಾಗ, ಆ ಕೆಂಪು ಸ್ವೆಟರಿನವನ ಮೇಲೆ ಯಾವಾಗ ಏರಿಹೋಗಿ ಕಡಿದೊಗೆದೇನೋ ಎಂದು ನಾಯಿ ಆತುರಪಡುತ್ತಿತ್ತು.

ನೀನು ಕೆಂಗಣ್ಣ ರಾಕ್ಷಸವೇ ಸೈ ಎಂದು ಅವನು ಅದಕ್ಕೆ ಹೊರಗೆ ಬರುವಷ್ಟು ಮಾತ್ರ ಬಾಗಿಲು ಸರಿಸಿದನು. ಕೈಯ್ಯಲ್ಲಿಯ ಬಾಚಿಯನ್ನು ಕೆಳಗೊಗೆದು ಬಲಗೈಯ್ಯಲ್ಲಿ ಟೊಣಪೆ ತೆಗೆದುಕೊಂಡನು.

ನಿಜಕ್ಕೂ ಬಕ್ ಕೆಂಗಣ್ಣ ದೆವ್ವವೇ ಆಗಿತ್ತು. ಅದರ ಮೈಗೂದಲು ಸೆಟೆದು ನಿಂತು, ಬಾಯಿಯಲ್ಲಿ ಬುರುಗು ಬಂದು ಕಣ್ಣು ಲಕಲಕಿಸುತ್ತಿದ್ದವು. ಆಲಕ್ಷಣದಲ್ಲಿಂದು ಅವನೆಡೆ ಹಾರುವ ಸಿದ್ಧತೆಯಲ್ಲಿತ್ತು. ಎರಡು ಹಗಲು, ಎರಡು ರಾತ್ರಿ ಒಟ್ಟುಗೂಡಿ ಸಂಗ್ರಹಿತವಾದ ಸಿಟ್ಟನ್ನೆಲ್ಲ ಇವನ ಮೇಲೆ ತೀರಿಸಿ ಕೊಳ್ಳಲು, ನೇರವಾಗಿ, ತನ್ನ ನೂರಾ ನಾಲ್ವತ್ತು ಪೌಂಡು ತೂಕದ ಕಬ್ಬಿಣ ದೇಹವನ್ನು ತೂರಿಕೊಂಡಿತು. ಇನ್ನೂ ನಡುವೆ ಗಾಳಿಯಲ್ಲಿರುವಾಗಲೆ, ದವಡಿಯ ಹಲ್ಲುಗಳಿಂದ ಕಡಿಯಬೇಕೆಂಬಷ್ಟರಲ್ಲಿಯೇ ಒಂದು ಹೊಡೆತ ಬಿದ್ದು ಬಾಯಿ ಒತ್ತಿ ಹಿಡಿದು ಹಿಚುಕಿದಂತಾಯಿತು. ಹೊಡಮುರಳಿ ಧಡಾರ್ ಎಂದು ನೆಲಕ್ಕೆ ಬಂದಿತು. ಟೊಣಪೆಯ ಹೊಡೆತದ ಅನುಭವ ಇಷ್ಟು ದಿವಸಗಳಲ್ಲಿ ಒಂದು ಸಲವೂ ಬಂದಿರಲಿಲ್ಲ ಅದಕ್ಕೆ. ಅರ್ಧ-ಮರ್ಧ ಚೀರಿ, ಬೊಗಳಿ ಮತ್ತೆ ಗಾಳಿಯಲ್ಲಿ ಹಾರಿತು. ಬಲವಾದ ಹೊಡೆತ ಬಿದ್ದುದರಿಂದ ಹಾರಲಿಕ್ಕಾಗದೆ ನೆಲಕ್ಕೆ ಕುಪ್ಪಳಿಸಿ ಬಿದ್ದಿತು. ಹೊಡೆತ ಟೊಣಪಿಯದೆ ಎಂದು ಈಗ ಮನ ವರಿಕೆಯಾದರೂ ಅದರ ಹುಚ್ಚು, ಎಚ್ಚರಿಕೆಯ ಸೀಮೆ ದಾಟಿತ್ತು. ಹತ್ತು ಹನ್ನೆರಡು ಸಲ ಹೀಗೆ ಹಾರಿದರೂ ನೆಲಕ್ಕೆ ಬೀಳುವದೆ ಗತಿಯಾಯಿತು.

ನಂತರ ಒಂದು ಭಯಂಕರ ಪೆಟ್ಟು ಬಿದ್ದೊಡನೆ ಬಕ್ ತಲೆ ತಿರುಗಿ ನೆಲ ಹಿಡಿಯಿತು. ಅತ್ತಿತ್ತ ಪ್ರಯಾಸದಿಂದ ಹೊರಳಾಡಿತು. ಬಾಯಿಯಿಂದ ರಕ್ತ ಸೋರಹತ್ತಿತು. ಹಿಂದಿನ ಅದರ ಮೃದು ತುಪ್ಪಳದ ಮೈ ಕಾಂತಿ ಎಲ್ಲಿ? ಈಗಿನ ವಿರೂಪಾವಸ್ಥೆ ಎಂತಹದು! ಈಗ ಸ್ವೆಟರಿನವ ಅದರ ಮೂಗಿಗೊಂದು ಏಟು ಕೊಟ್ಟ. ಹಿಂದಿನ ನೋವು ಈಗಿನ ಸಂಕಟದ ಮುಂದೆ ಹೇಳಹೆಸರಿಲ್ಲ ದಾಯಿತು. ಸಿಂಹದಂತೆ ಗರ್ಜಿಸಿ ಬಕ್ ಮತ್ತೆ ಮನುಷ್ಯನೆಡೆ ಜಿಗಿಯಿತು. ನಾಯಿಯ ದವಡೆಯ ಹಲ್ಲು ಹಿಡಿದ ಅವನು ತಿರುವಿ ಒಗೆದ. ಗಾಳಿಯಲ್ಲಿ ಪೂರ್ಣ ಒಂದು ಸುತ್ತು ತಿರುಗಿ ಬಕ್ ಎದೆ ಮೇಲಾಗಿ ನೆಲಕ್ಕೆ ಕುಕ್ಕರಿಸಿತು.

ಕೊನೆಯ ಸಲ ನಾಯಿ ಯತ್ನಿಸಿತು. ಕಡೆಯ ಬಿರುಸು ಏಟಿಗೆ ಅದು ಪೂರ್ಣ ಎಚ್ಚರತಪ್ಪಿ ನೆಲದ ಮೇಲೆ ಉರುಳಿತು.

ಬಕ್ ಮೂರ್ಛೆ ತಿಳಿದೆದ್ದಿತು. ಆದರೆ ಮೊದಲಿನ ಆ ಶಕ್ತಿ ಎಲ್ಲಿಯೋ ಮಾಯವಾಗಿತ್ತು. ಅದು ಬಿದ್ದಲ್ಲಿಯೇ ಮಲಗಿ ಕೆಂಪು ಸ್ವೆಟರಿನ ಮನುಷ್ಯ ನನ್ನು ನೋಡಿತು.

ಪಂಜರ ಹಾಗೂ ನಾಯಿಯ ವಿಷಯವಾಗಿ ಸಲೂನಿನೊಡೆಯನ ಓಲೆಯನ್ನು ಆ ಮನುಷ್ಯ ತನ್ನಷ್ಟಕ್ಕೆ ತಾನೇ ಓದಿಕೊಂಡ. ಏಕಪಾತ್ರಾಭಿನಯ ಮಾಡಿದ. "ಬಕ್ ಮರಿ, ಎಂದು ನಿಜವಾದ ವಾತ್ಸಲ್ಯದಿಂದ ಅದನ್ನುದ್ದೇಶಿಸಿ ಹೇಳಿದ. "ಇಷ್ಟು ಹೊತ್ತು ನಮ್ಮಿರ್ವರಲ್ಲಿ ರಗಳೆಯಾಯಿತು. ಅದನ್ನೆಲ್ಲ ಮರೆತುಬಿಡದೆ ಗತ್ಯಂತರವಿಲ್ಲ. ನಿನ್ನ ಸ್ಥಾನ-ಮಾನ ನಿನಗೆ ಗೊತ್ತಾದವು. ನನ್ನದರ ಅರಿವೂ ನನಗಾಗಿದೆ. ಒಳ್ಳೆ ನಾಯಿಯಾಗಿ ವರ್ತಿಸಿದರೆ ಎಲ್ಲವೂ ಸುಸೂತ್ರವಾಗಿ ನಡೆಯುವದು. ಖೊಟ್ಟಿಯಾದೆಯೊ—ಏನೂ ಸುಖ ಕಾಣೆ! ತಿಳಿಯಿತೆ?"

ಈ ವರೆಗೆ ನಿರ್ದಯತನದಿಂದ ನುಗ್ಗುನುಗ್ಗಾಗಿಸಿದ ತಲೆಯನ್ನೇ ಅವನು ಪ್ರೀತಿಯಿಂದ ಮುಂಡಾಡಿದ. ನಾಯಿಯ ಕೂದಲು ಬಿರುಸಾಗಿದ್ದರೂ ಲಕ್ಷಿಸದೆ ನಿರ್ಭಯವಾಗಿ ಕೈಸವರಿದ. ಅವನು ನೀರು ತಂದಾಗ ಆತುರತೆಯಿಂದ ಅದು ಕುಡಿಯಿತು. ಆ ಮನುಷ್ಯನ ಕೈಯಿಂದ ಹಸಿ ಮಾಂಸವನ್ನು ತುಣುಕು ತುಣುಕುಮಾಡಿ ತಿಂದಿತು.

ಮೈಗೆ ಗಾಯಗಳಾಗಿದ್ದವು. ಎಲುವುಗಳೇನೂ ಮುರಿದಿಲ್ಲವೆಂಬದು ನಾಯಿಗೆ ತಿಳಿದಿತ್ತು. ಟೊಣಪಿಯನ್ನು ಹಿಡಿದವನೆದುರು ತನ್ನ ಆಟ ಸಾಗದು ಎಂದು ಖಚಿತವಾಗಿ ಅದಕ್ಕೆ ಹೊಳೆಯಿತು. ಈಗ ಕಲಿತ ಪಾಠ ಜೀವನವಿದ್ದಕ್ಕೂ ಸಂಸ್ಮರಣೀಯ. ಟೊಣಪಿಯದು ವಿಲಕ್ಷಣ ಶಕ್ತಿ. ಪ್ರಾಚೀನ ಕಾಲದ ಕಾಯಿದೆಯ ಪ್ರತೀಕವದು. ಅರ್ಧಮರ್ಧ ಪರಿಚಯ ಅವರದು ಆದಂತಾಯಿತು. ಜೀವನದ ಸಂಗತಿಗಳ ಸ್ವರೂಪ ಬದಲಾಯಿತು. ಎಲ್ಲ ಸಂಕಟಗಳನ್ನು ಠಕ್ಕುತನದಿಂದ ಎದುರಿಸಿತು ಅದು. ದಿನಗಳೆದಂತೆ ಬೇರೆ ನಾಯಿಗಳೂ ಅಲ್ಲಿಗೆ ಬಂದವು. ಕೆಲವು ಪಂಜರದಲ್ಲಿದ್ದವು. ಕೆಲವಕ್ಕೆ ಹಗ್ಗ ಹಚ್ಚಿದ್ದರು. ಕೆಲವಂತೂ ಅತಿ ಸಾಧು. ಇನ್ನುಳಿದುವು ತನ್ನಂತೆ ಸಿಂಹದೋಪಾದಿಯವು! ಆದರೆ ಎಲ್ಲ ಕೆಂಪು ಸ್ವೆಟರಿನವನಿಗೆ ವಶವರ್ತಿಯಾಗಿದ್ದವು. ಅವನ ಅಮಾನುಷ ವೃತ್ತಿ ಕಂಡು ಬಕ್ ಹೊಸ ಪಾಠ ಕಲಿಯಿತು. ಆಯುಧ ಸನ್ನದ್ಧನಾದವನ ಬಳಿ ಕಾಯಿದೆಗಳಿವೆ. ಪಾಲಿಸವೆ ವಿಧಿ ಇಲ್ಲವೆಂದು ಮನವರಿಕೆ ಮಾಡಿಕೊಂಡಿತದು. ಪೂರ್ಣ ಒಪ್ಪಂದವಾಗದಿದ್ದರೇನಾಯಿತು? ಹೊಡಿಸಿಕೊಂಡಾದರೂ ಕೊನೆಗೆ ಒಡೆಯನ ಕೈ ನೆಕ್ಕುವ

ಚಾಳಿ ಬಕ್ ಕಲಿಯಲಿಲ್ಲ. ಆದರೆ ಒಂದು ನಾಯಿ ಮಾತ್ರ ಪ್ರಭುತ್ವ ಸಂಪಾದಿಸಿಯೇ ತೀರೇನೆಂದು ಹಟ ಹಿಡಿದದ್ದಕ್ಕೆ ಜೀವಕ್ಕೆ ಎರವಾಗಬೇಕಾಯಿತು.

ಆ ಕೆಂಪು ಸ್ವೆಟರಿನವನೊಡನೆ ಆಗೀಗ ಜನರು ಉದ್ವೇಗದಿಂದ ಬಗೆಬಗೆಯಾಗಿ ಹರಟೆ ಹೊಡೆಯುವದು ನಡೆದೇ ಇದ್ದಿತು. ಅಪರಿಚಿತರನೇಕರು ಹಣ ಎಣಿಸಿ ಒಪ್ಪಿಗೆಯಾದ ನಾಯಿಯನ್ನು ಒಯ್ಯುತ್ತಿದ್ದರು. ಇವರೆಲ್ಲ ಎಲ್ಲಿಗೆ ಹೋಗುವರೊ ಬಕ್‌ನಿಗೆ ಅರ್ಥವಾಗುತ್ತಿರಲಿಲ್ಲ. ಬಹುತರವಾಗಿ ಅವರು ಮರಳುತ್ತಿರಲೇ ಇಲ್ಲ. ಆದರೆ ಭವಿಷ್ಯದ್— ಜೀವನ ಮಾತ್ರ ಭಯಾನಕವೆನಿಸುತ್ತಿತ್ತು ಅದಕ್ಕೆ. ಎಷ್ಟು ಹೊತ್ತಾದರೂ ತನ್ನ ಸರತಿ ಬಾರದ್ದಕ್ಕೆ ಬಕ್ ಹರ್ಷಿಸಿತು.

ಕೊನೆಗೊಮ್ಮೆ ಅದರ ಪಾಳಿಯೂ ಬಂದಿತು. ಹರುಕು ಮುರುಕು ಇಂಗ್ಲಿಶ್ ಮಾತಾಡುವವನೊಬ್ಬ ವಿಲಕ್ಷಣ ರೀತಿಯಲ್ಲಿ ಅಸಹ್ಯ ಉದ್ಗಾರ ತೆಗೆಯುತ್ತ ಬಂದ.

ಬಕ್‌ನನ್ನು ನೋಡಿದೊಡನೆಯೆ—'ನನ್ನ ಭಾಗ್ಯ !' ಎಂದು ಉದ್ಗಾರ ತೆಗೆದು ಬೆಲೆ ವಿಚಾರಿಸಿದ.

ಕೆಂಪು ಸ್ವೆಟರಿನವ 'ಮೂರು ನೂರು' ಎಂದು ನುಡಿದ, ಥಟ್ಟನೆ. 'ಸರಕಾರದ ಹಣ; ನಿನ್ನದೇನು ಹೋದೀತು, ಪೆರಾಲ್ಟ ?' ಎಂದ.

ಪೆರಾಲ್ಟ ಹುಬ್ಬುಗಂಟಿಕ್ಕಿದ. 'ನಾಯಿ ಒಳ್ಳೆಯದಾದರೇನಾಯಿತು ? ಬೆಲೆ ಆಕಾಶದೆತ್ತರ ಹಾರಬೇಕೇ ?' ಎಂದು ಬೆಲೆ ಕೇಳಿದೊಡನೆ ನುಡಿದ. ಕಾನಡಾ ಸರಕಾರಕ್ಕೇನು ಹಾನಿ ? ವ್ಯವಹಾರಕ್ಕೂ ವ್ಯತ್ಯಯವಾಗುವಂತಿಲ್ಲ. ಮುಖ್ಯವಾಗಿ ಪೆರಾಲ್ಟನಿಗೆ ನಾಯಿಯ ನೆಲೆ ತಿಳಿಯುತ್ತಿತ್ತು. ಬಕ್‌ನನ್ನು ನೋಡಿದೊಡನೆಯೆ ಅದರ ಅಪೂರ್ವತೆಗೆ ದಂಗಾಗಿ ನಿಂತ. 'ಸಾವಿರಕ್ಕೊಂದು ಸಿಗುವ ಜಾತಿಯ ನಾಯಿ' ಎಂದು ಪ್ರಶಂಸಿಸಿದ.

ಇಬ್ಬರ ನಡುವೆ ಹಣದ ವ್ಯವಹಾರ ನಡೆದದ್ದು ಬಕ್ ನೋಡಿತು. ತನ್ನೊಡನೆ ಕರ್ಲಿ ಎಂಬ ಸುಸ್ವಭಾವಿ ನ್ಯೂಫೌಂಡಲಂಡ್ ನಾಯಿ ಬಂದದ್ದಕ್ಕೆ ಏನೂ ಅಚ್ಚರಿ ಅನಿಸಲಿಲ್ಲ. ಕೆಂಪು ಸ್ವೆಟರಿನ ಮನುಷ್ಯನನ್ನು ಅಂದು ಕಂಡದ್ದೇ ಕೊನೆಯ ಸಲವೆನ್ನಬೇಕು. ಬೆಚ್ಚಗಿನ ದಕ್ಷಿಣ ಪ್ರದೇಶವನ್ನು ಕರ್ಲಿ ಹಾಗೂ ಬಕ್ ನೋಡಿದ್ದೂ ಕೊನೆಯ ಸಲ. ಪೆರಾಲ್ಟನು ಎರಡೂ ನಾಯಿ

ಗಳನ್ನು ಕೆಳಗೆ ಒಯ್ದು, ಫ್ರ್ಯಾಂಕೊಯಿಸ್ ಎಂಬ ಹೆಸರಿನ ಕಪ್ಪು ಮುಖದ ರಾಕ್ಷಸನೊಬ್ಬನ ವಶಕ್ಕೆ ಕೊಟ್ಟನು. ಪೆರಾಲ್ಟ ಫ್ರೆಂಚ್ ಕ್ಯಾನಡಿಯನ್; ಬಿಸಿಲಿಗೆ ಬೆಂದುಹೋದಂತೆ ಬಣ್ಣ. ಆದರೆ ಫ್ರ್ಯಾಂಕೊಯಿಸ್ ಪೂರ್ಣ ಫ್ರೆಂಚ್ ಕ್ಯಾನಡಿಯನ್ನನಲ್ಲ; ಬಣ್ಣ ಇನ್ನಷ್ಟು ಕಪ್ಪು. ಬಕ್‌ನಿಗೆ ಉರ್ವರೂ ಹೊಸ ತರದ ಜನರು (ಇನ್ನೆಷ್ಟು ಇಂತಹರನ್ನು ನೋಡುವದು ಅದರ ದೈವ ದಲ್ಲಿತ್ತೊ !). ನಿಜವಾಗಿ ಅವರ ವಿಷಯಕ್ಕೆ ಅದಕ್ಕೆ ಆದರವೆನಿಸದಿದ್ದರೂ ಪ್ರಾಮಾಣಿಕತನದಿಂದ ನಡೆದುಕೊಂಡು ಮರ್ಯಾದೆ ಸಲ್ಲಿಸಬೇಕೆಂದು ಸಂಕ ಲ್ಪಿಸಿತು. ಪೆರಾಲ್ಟ ಹಾಗೂ ಫ್ರ್ಯಾಂಕೊಯಿಸ್ ಒಳ್ಳೆ ಜನರೆಂದು ಹೊಳೆ ಯಲು ಅದಕ್ಕೆ ಬಹುಕಾಲ ಹಿಡಿಯಲಿಲ್ಲ. ಅತ್ಯಂತ ನ್ಯಾಯಸಿಷ್ಠುರರವರು; ನಾಯಿಗಳ ಸ್ವಭಾವ ಅರಿಯುವದರಲ್ಲಿ ಬಲು ಚಾಣಾಕ್ಷರು.

ನಾವ್ಹಲ್ ಡೆಕ್ಕಿನ ಮೇಲೆ ಬಕ್, ಕರ್ಲಿ ನಾಯಿಗಳೆಡೆಗೆ ಬೇರೆ ಹಲವು ನಾಯಿಗಳು ಬಂದು ಕೂಡಿದವು. ಅವುಗಳಲ್ಲಿ ಹಿಮದಷ್ಟು ಬಿಳಿ ನಾಯಿ ಒಂದಿತ್ತು. ಭೂಗರ್ಭಶಾಸ್ತ್ರದ ಅಭ್ಯಾಸಕ್ಕೆಂದು ಹೊರಟ ತಂಡದೊಡನೆ ಹೊರಟ ಕಪ್ತಾನನೊಬ್ಬನು ಅದನ್ನು ತಂದಿದ್ದ.

ಹೊರಗೆ ನೋಡಲು ಒಳ್ಳೆ ಸ್ನೇಹಮಯ ಎಂದು ಕಾಣುತ್ತಿತ್ತು. ಮುಗುಳು ನಗೆ ಸೂಸಿ ಒಳಗೇ ವಿಶ್ವಾಸಘಾತುಕತನ ತೋರುವಲ್ಲಿ ಅದು ಹಿರಿದಾದುದು. ಮೊದಲ ಊಟಕ್ಕೇ ಬಕ್‌ನ ಆಹಾರ ಕದಿಯುವಲ್ಲಿ ಅದರ ಜಾಣತನ (?) ಅಭಿವ್ಯಕ್ತವಾಯಿತು. ಅನ್ಯಾಯಕ್ಕೆ ಪ್ರತೀಕಾರವೆಂದು ಬಕ್ ಅದಕ್ಕೆ ಬುದ್ಧಿ ಕಲಿಸಲು ಹೊರಟಾಗ, ಒಡೆಯ ಫ್ರ್ಯಾಂಕೊಯಿಸ್‌ನ ಚಬಕ ಧ್ವನಿಗೈದಿತು. ಅಪರಾಧಿಗೆ ಮೊದಲಶಿಕ್ಷೆ ವಿಧಿಸಲಾಯಿತು. ಉಳಿದ ಎಲವನ್ನಷ್ಟೆ ತಿನ್ನುವದು ಬಕ್‌ನಿಗೆ ಲಭ್ಯವಾಯಿತು. ಫ್ರ್ಯಾಂಕೊಯಿಸ್‌ನ ದೇನು ತಪ್ಪು—ಎಂದು ಬಕ್ ಅವನನ್ನೇ ನಂಬಿತು.

ಬೇರೊಂದು ನಾಯಿ ತನ್ನಷ್ಟಕ್ಕೆ ತಾನೆ ಸುಮ್ಮನೆ ತಿನ್ನುತ್ತಿತ್ತು. ಕದಿ ಯುವ ಚಟವಿರಲಿಲ್ಲ ಅದಕ್ಕೆ. ಕಳೆಹೀನ ಪ್ರಾಣಿಯದು. ಉಳಿದವರ ಉಸಾ ಬರಿ ತನಗೇಕೆ ಎನ್ನುವ ಮಟ್ಟಿಗೆ ಕರ್ಲಿಯೊಡನೆ ಅದು ನಡೆದುಕೊಳ್ಳುತ್ತಿತ್ತು. ಅದರ ಹೆಸರು ಡೇವ್ಹ. ಅದು ತನ್ನ ಊಟ ಮುಗಿಸಿ ನಿಶ್ಚಿಂತತೆಯಿಂದ ಮಲಗುತ್ತಿತ್ತು. ಯಾತರಲ್ಲೂ ಅಂತಹ ಆಸ್ಥೆ ಕಾಣಲಿಲ್ಲ. ನಾವ್ಹಾಲ

ಹಡಗ ಕ್ವೀನ ಚಾರ್ಲಟ್ಟೆ ದಾಟಿ ಮುಂದೆ ಕ್ರಮಿಸಿದರೂ ದೆವ್ವ ಬಡಿದಂತೆ ಹಾಗೇ ಇದ್ದಿತು. ಬಕ್ ಹಾಗೂ ಕರ್ಲಿ ಹೆದರಿ ಹೌಹಾರಿಹೋಗಿದ್ದರೂ ಡೇವ್ಹ ಕಾತರತೆಯಿಂದ ಅವುಗಳೆಡೆ ನೋಟ ಬೀರಿ ಆಕಳಿಸಿ ಮತ್ತೆ ಮಲಗಿ ಬಿಟ್ಟಿತು.

ಹಗಲು ರಾತ್ರಿ ಎನ್ನದೆ ಹಡಗ ಕ್ರಮಿಸಿತು—ತನ್ನದೆ ರಾಜಠೀವಿಯಲ್ಲಿ ! ಒಂದು ದಿವಸ ಬೇರೊಂದರಂತೆಯೇ ಇದ್ದರೂ ಹವೆ ಮಾತ್ರ ಹೆಚ್ಚು ತಂಪಾಗುತ್ತ ನಡೆದುದು ಬಕ್‌ನಿಗೆ ತಿಳಿಯತೊಡಗಿತು. ಕೊನೆಗೆ ಒಂದು ದಿನ ಮುಂಜಾವು ಹಡಗ ನಿಂತಿತು. ಎಲ್ಲೆಡೆ ಉದ್ವಿಗ್ನತೆ. ಏನೋ ಬದಲಾವಣೆಯಾಗಲಿದೆ ಎಂದು ನಾಯಿಗಳೆಲ್ಲ ಹೆದರಿದ್ದವು. ಫ್ರ್ಯಾಂಕೊಯಿಸ್ ಎಲ್ಲಕ್ಕೂ ಚಬಕದಿಂದ ಹೊಡೆದು ಡೆಕ್ಕಿಗೆ ತಂದ. ಕೆಸರಿನಷ್ಟು ಮೆತ್ತಗಿದ್ದ ಬಿಳಿ ವಸ್ತುವಿನಲ್ಲಿ ಮೊದಲಸಲ ಬಕ್‌ನ ಕಾಲು ಕುಸಿದು ಹೋದವು. ಅದು ಹಾರಿ ಬಿದ್ದಿತು. ಗಾಳಿಯಲ್ಲಿಯೂ ಹೀಗೇ ಬಿಳಿಕಣಗಳು ತೇಲುತ್ತಿದ್ದವು. ಮೈ ಅಲುಗಾಡಿಸಿ ನೋಡಿತು. ಆದರೂ ಮೇಲಿಂದ ಬೀಳುವ ಕಣಗಳೇನೂ ನಿಲ್ಲಲಿಲ್ಲ. ಕುತೂಹಲಿಯಾಗಿ ಅದನ್ನು ನೆಕ್ಕಿತು. ಬೆಂಕಿಯಂತೆ ಕೊರೆಯತೊಡಗಿತದು. ಎಲ್ಲ ಅದಕ್ಕೆ ಸೋಜಿಗದಾಯಿತು. ಎಷ್ಟು ಸಲ ಪರೀಕ್ಷಿಸಿದರೂ ಮತ್ತೆ ಮತ್ತೆ ಅದೇ ಬಗೆಯ ವಿಲಕ್ಷಣ ಅನುಭವ. ಸುತ್ತುಮುತ್ತಲಿನ ಜನರೆಲ್ಲ ಇದನ್ನು ನೋಡಿ ಗಹಗಹಿಸಿ ನಕ್ಕರು. ಬಕ್‌ನಿಗೆ ನಾಚಿಕೆಸಾವೆನಿಸಿತು. ಯಾಕೊ ಏನೊ ಹೊಳೆಯಲಿಲ್ಲ. ಹಿಮವನ್ನು ಕಂಡದ್ದು ಅದು ಮೊಟ್ಟ ಮೊದಲ ಬಾರಿ !



## ೨. ಆಯುಧ, ವಿಷಹಲ್ಲಿನ ಕಾನೂನು

ಡಿಯಾ ತೀರದಲ್ಲಿ ಬಕ್ ಮೊದಲದಿನ ಕಳೆಯುವದು ದುಸ್ತರವಾಯ್ತು. ದುಃಸ್ವಪ್ನ ಬಿದ್ದವು. ಪ್ರತಿಯೊಂದು ಗಳಿಗೆ ಅಚ್ಚರಿ, ಉದ್ವಿಗ್ನತೆಗಳಿಂದೊಡ ಗೂಡಿತ್ತು. ನಾಗರಿಕತೆಯ ಗೌರೀಶಂಕರದ ತುತ್ತತುದಿಯಿಂದ ಪ್ರಕೃತಿಯ ಮೂಲಭೂತ ಸ್ವರೂಪದ ಮಡಲಿಗೆ ಬಕ್‌ನನ್ನೊಯ್ದು ಚಲ್ಲಿಕೊಟ್ಟಂತಾಯ್ತು. ಪಿರಿ ಪಿರಿ ತಿರುಗವದು. ಅಖಂಡ ಬೇಜಾರ. ಮಾಡಲು ನಿಶ್ಚಿತ ಕೆಲಸವಿಲ್ಲ. ಶಾಂತತೆಯಿಲ್ಲ, ವಿಶ್ರಾಂತಿಯಿಲ್ಲ, ಕ್ಷಣವೂ ಸುರಕ್ಷತತೆಯ ಲವಲೇಶವಿಲ್ಲ. ಎಲ್ಲವೂ ಅಸ್ತವ್ಯಸ್ತ. ಪ್ರತಿಕ್ಷಣವೂ ದುಃಖಮಯ. ಯಾವಾಗಲೂ ಜಾಗ ರೂಕತೆ ತಳೆಯದೆ ಗತಿ ಇರಲಿಲ್ಲ. ಅವರೆಲ್ಲ ಕಾಡುಜನರು. ಆಯುಧ, ವಿಷ ಹಲ್ಲಿನ ಕಾನೂನಿನ ಹೊರತು ಬೇರಾವ ವ್ಯವಸ್ಥಿತ ಆಡಳಿತ ಇರಲಿಲ್ಲ.

ನಾಯಿಗಳು ತೋಳಗಳಂತೆ ಕಚ್ಚಾಡುವದು ಅದಕ್ಕೆ ಹಿಂದೆಂದೂ ತಿಳಿ ದಿರಲಿಲ್ಲ. ಅದರಿಂದ ಹೊಸ ಪಾಠ ಕಲಿತಂತಾಯಿತು. ಆ ಜೀವನದ ಅನು ಭವವೈವಿಧ್ಯದ ಮೂಲಕ ಆದಕ್ಕೆ ಲಾಭವಾಗದಿರಲಿಲ್ಲ. ಕರ್ಲಿ ನಾಯಿ ಮೊದಲ ತುತ್ತಾಯಿತು. ಕಟ್ಟಿಗೆಯ ಕಾರಖಾನೆಯ ಹತ್ತರ ಶಿಬಿರವಿದ್ದಿತು. ತೋಳದಂತಹ 'ಹಸ್ಕಿ' ನಾಯಿಯ ಬಳಿ ಕರ್ಲಿ ಹೋಯಿತು. ಕ್ಷಣಾರ್ಧ ದಲ್ಲಿ ಮಿಂಚಿನಂತೆ ತೂರಿಬಂದು ಅದು ಗಾಯಗೊಳಿಸಿತು. ಕರ್ಲಿಯ ಮೋರೆ ಹರಿದು ರಕ್ತಮಯವಾಯ್ತು.

ಈ ಕಾದಾಟವೆಲ್ಲ ತೋಳದ ರೀತಿಯಲ್ಲಿಯದು. ಗಾಯಗೊಳಿಸಿ ಟಣ್ಣನೆ ಜಿಗಿದು ಬಿಡುವದು. ಇಂತಹ ಮೂವತ್ತು ನಲವತ್ತು 'ಹಸ್ಕಿ' ನಾಯಿ ಗಳು ಸುತ್ತುವರಿದವು. ಅವುಗಳ ತಾದಾತ್ಮ್ಯ, ತಿನ್ನುವ ರೀತಿ ಬಕ್‌ಗೆ ಅರ್ಥವಾಗಲಿಲ್ಲ. ಕರ್ಲಿ ಶತ್ರುವಿನ ಮೇಲೆ ಏರಿ ಹೋಯಿತು. ಮತ್ತೆ ಮೊದಲಿನಂತೆ ಮಿಂಚಿನ ಗಾಯ! ಮತ್ತೊಮ್ಮೆ ಏರಿಹೋದಾಗ ತಾನೆ ಉರುಳಿಬಿತ್ತು. ಉಳಿದ ನಾಯಿಗಳೆಲ್ಲ ಸುಮ್ಮನೆ ನಿರೀಕ್ಷಣೆಯಲ್ಲಿದ್ದವು.

ತತ್‌ಕ್ಷಣ ಎಲ್ಲ ನಾಯಿಗಳು ಗುರುಗುಟ್ಟುತ್ತ ಬೊಗಳುತ್ತ ಕರ್ಲಿಯನ್ನು ಮುತ್ತಿಬಿಟ್ಟವು. ಕರುಳು ಕತ್ತರಿಸುವಂತೆ ಕರ್ಲಿ ಚೀರಿಟ್ಟಿತು.

ಇವೆಲ್ಲ ಕಣ್ಮುಟ್ಟ ನೋಡಿದ ಬಕ್ ಹೌಹಾರಿಹೋಯಿತು. ಕಂದಿ ಬಣ್ಣದ ನಾಲಗೆಯ ಸ್ಪಿಟ್ಜ್ ನಗುತ್ತ ಓಡಿಹೋಪುದನ್ನು ನೋಡಿತು. ನಾಯಿಗಳ ಗಲಭೆಯಲ್ಲಿ ಫ್ರಾನ್ಸ್ವಾ ಕೈಕೊಡಲಿ ತೆಗೆದುಕೊಂಡು ನುಗ್ಗಿದುದನ್ನು ನೋಡಿತು. ಎಲ್ಲ ನಾಯಿಗಳನ್ನು ಚದರಿಸಲು ಮೂವರು ಟೊಣಪೆ ತೆಗೆದುಕೊಂಡು ಹೊರಟರು. ಬಹಳ ಹೊತ್ತು ಹಿಡಿಯಲಿಲ್ಲ. ಕರ್ಲಿ ಕೆಳಗೆ ಬಿದ್ದ ಎರಡು ನಿಮಿಷಗಳಲ್ಲಿ ಎಲ್ಲವನ್ನೂ ಓಡಿಸಿದರು. ಕರ್ಲಿ ನಿರ್ಜೀವಿಯಾಗಿತ್ತು. ರಕ್ತದ ಮಡುವಿನಲ್ಲಿ ಕಾಲುಚಲ್ಲಿ ಬಿದ್ದಿತ್ತು. ನಿದ್ರಾವಸ್ಥೆಯಲ್ಲಿಯೂ ಬಕ್‌ಗೆ ಇದೇ ದೃಶ್ಯ. ಇದೇ ಜಗತ್ತಿನ ಲೀಲೆ. ಎಲ್ಲಿಯೂ ಪ್ರಾಮಾಣಿಕತೆ ಇಲ್ಲ. ಅವನತಿಯೊಂದಿಗೆ ಮರಣವೆ! ಕೆಳಗೆ ಬೀಳಕೂಡದೆಂದು ಬಕ್ ಸಂಕಲ್ಪಿಸಿತು. ಸ್ಪಿಟ್ಜ್ ನಾಲಗೆ ಚಾಚಿ ಮತ್ತೆ ನಕ್ಕಿತು. ತಿರುಗಿ ತಿರುಗಿ ನಕ್ಕಿತು. ಬಕ್‌ಗೆ ಇದೆಲ್ಲ ಅಸಹನೀಯವೆನಿಸಿತು.

ಕರ್ಲಿಯ ಸಾವಿನ ನಂತರ ಬಕ್‌ನ ಜೀವನದಲ್ಲಿ ಮತ್ತೊಂದು ಆಘಾತವಾಯಿತು. ಫ್ರಾನ್ಸ್ವಾಯಿಸನು ಅದರ ಮೇಲೆ ಜೀನು ಹಾಕಿದ್ದನು. ಕುದುರೆಗೆ ಈ ಪ್ರಕಾರ ಹಾಕುತ್ತಿದ್ದುದು ಅದಕ್ಕೆ ಗೊತ್ತು. ಕೊಳ್ಳದಗುಂಟ ಹೋಗಿ ಅಡವಿಯಿಂದ ಉರುವಲು ತರುವದು ಫ್ರಾನ್ಸ್ವಾಯಿಸನ ಪರಿಪಾಠ. ಜಾರುಬಂಡಿಯನ್ನು ಜಗ್ಗುವದು ನಾಯಿಗಳ ಕೆಲಸ. ಕೆಳವರ್ಗದ ಪ್ರಾಣಿಗಳ ಕೆಲಸವದು---ತನಗೆ ಏಕೆ ಎಂದುಕೊಂಡು ಬಕ್ ಬಂಡೆಬ್ಬಿಸಿತು. ಜಗ್ಗುವಾಗ ಪುನಃಪೂರ್ವಕವಾಗಿ ಪ್ರೈ ಉಳಿಸಿಕೊಂಡಿತು. ಇದೆಲ್ಲ ಅದಕ್ಕೆ ವಿಚಿತ್ರ ಕಂಡಿರಬೇಕು. ಫ್ರಾನ್ಸ್ವಾಯಿಸ್ ಕಠೋರನಾದ. ಕೆಲಸವಾಗಲೇಬೇಕೆಂದು ಹಟ ಹಿಡಿದ. ಚಬಕದಿಂದ ಒಂದು ಕ್ಷಣದಲ್ಲಿ ಕಾರ್ಯ ಸಾಧಿಸಿಕೊಂಡ. ಆದರೆ ಡೇವ್ಡ ಅನುಭವಿಕ. ಹಿಂದೆ ಇದ್ದು ಬಕ್‌ನ ತಪ್ಪು ತಿದ್ದುತ್ತಿತ್ತು. ಸ್ಪಿಟ್ಜ್ ಮುಂದಾಳು. ತನ್ನ ಭಾರ ಕಡಿಮೆಮಾಡಿಕೊಳ್ಳಲು ಬಕ್‌ನನ್ನು ಬಲಿಕೊಡುತ್ತಿತ್ತು. ಇಬ್ಬರಿಂದ ಬಕ್ ಹೀಗೆ ಪಾಠ ಕಲಿತಿತು. ಫ್ರಾನ್ಸ್ವಾಯಿಸನ ಕಾರ್ಯ ನಿರಾಯಾಸವಾಗಿ ನೆರವೇರತೊಡಗಿತು. ಶಿಬಿರಕ್ಕೆ ಮರಳುವಷ್ಟರಲ್ಲಿ 'ಹೊ' ಎಂದರೆ ನಿಲ್ಲುವದು, 'ಮಶ್' ಎಂದರೆ ಮುನ್ನಡೆಯುವದು,

ಇಳಿಜಾರಿನಲ್ಲಿ ವೇಗದಿಂದ ಗಾಡಿ ನುಗ್ಗುವಾಗ ಮೈ ಉಳಿಸಿಕೊಳ್ಳುವ ಕಲೆ—
ಎಲ್ಲ ಕಲಿತುಕೊಂಡಿತ್ತು !

'ಉಳಿದ ನಾಯಿಗಳು ಪರವಾ ಇಲ್ಲ; ಆದರೆ ಬಕ್‌ಸಿಗೆ ಮಾತ್ರ ಏನೂ ತಿಳಿಯದು; ನಾವು ಕಲಿಸಲೇಬೇಕು' ಎಂದು ಫ್ರ್ಯಾಂಕೊಯಿಸ್ ಪೆರಾಲ್ಟಸಿಗೆ ಹೇಳಿದ.

ಮಧ್ಯಾಹ್ನವಾಗುವದರೊಳಗಾಗಿಯೆ ತನ್ನ ಎಲ್ಲ ಸಾಮಗ್ರಿ ಕಟ್ಟಿಕೊಂಡು ಪ್ರಯಾಣಬೆಳೆಸಬೇಕಾಗಿದ್ದುದರಿಂದ ಪೆರಾಲ್ಟ ಅವಸರದಲ್ಲಿಯೇ ಹೋಗಿ ಮತ್ತೆರಡು ನಾಯಿ ತಂದ. 'ಬಿಲ್ಲಿ', 'ಜೊ' ಎಂಬ ಆ ನಾಯಿಗಳು ಸಹೋದರರು. 'ಹಸ್ಕಿ' ಜಾತಿಯವು. ಒಬ್ಬಳೆ ತಾಯಿಯ ಮಕ್ಕಳಾಗಿದ್ದರೂ ಅವುಗಳ ಸ್ವಭಾವ ರೀತಿ ನೀತಿಗಳಲ್ಲಿ ಹಗಲು ರಾತ್ರಿಯ ನಡುವಿನಷ್ಟು ಅಂತರ ! 'ಬಿಲ್ಲಿ'ಯ ಒಂದು ದೋಷವೆಂದರೆ ಅತಿ ಒಳ್ಳೆ ಸ್ವಭಾವ. ಆದರೆ 'ಜೊ' ಹಾಗಲ್ಲ. ಕಟುಮನೋವೃತ್ತಿಯದು. ಯಾವಾಗಲೂ ಗುರುಗುಟ್ಟು ವದು. ಅದರ ಕಣ್ಣಿನಲ್ಲಿಯೇ ಕುಹಕವೃತ್ತಿ ಸ್ಫುಟವಾಗಿತ್ತು. ಬಕ್ ಕೂಡಲೆ ಗೆಳೆತನ ಮಾಡಿಕೊಂಡಿತು. ಡೇವ್ಹ ತಾತ್ಸಾರಿಸಿತು. ಸ್ಪಿಟ್ಝ ಒಂದರ ತರು ವಾಯ ಒಂದರಂತೆ ಈರ್ವರೊಡನೆಯೂ ಕಾದಾಡಿತು. ಒಪ್ಪಂದದ ಧರ್ತಿ ಯಲ್ಲಿಯೇ ಬಿಲ್ಲಿ ಬಾಲ ಅಲುಗಾಡಿಸಿತು. ಆದರೆ ಇದೆಲ್ಲ ನೀರಿನಲ್ಲಿ ಹೋಮ ವೆಸಗಿದಂತಾಗಲು ಓಡುವದೇ ಉಚಿತವೆಂದು ಹಿಂತೆಗೆಯಿತು. ಸ್ಪಿಟ್ಝ ಇಷ್ಟಾಗಿಯೂ ಕಡಿದಾಗ ನೋವಿನಿಂದ ಒದರಿತು. ಸ್ಪಿಟ್ಝ ಸುತ್ತುಹಾಕಿದರೂ ಜೊ ಅದನ್ನೆದುರಿಸಿತು. ಕೂದಲು ಉಬ್ಬಿಸಿ, ಕಿವಿ ಹಿಂದಕ್ಕೊಯ್ದು, ತುಟಿ ಕಚ್ಚಿ, ಸಿಟ್ಟಿನ ಪ್ರತಿರೂಪದಂತೆ ತೋರಿತು. ಇದರ ಅವತಾರ ನೋಡಿ ಸ್ಪಿಟ್ಝ ಅದಕ್ಕೆ ಶಿಸ್ತು ಕಲಿಸುವ ಹವ್ಯಾಸವನ್ನೇ ಬಿಟ್ಟುಕೊಟ್ಟಿತು. ತನ್ನ ಸೋಲು ಮುಚ್ಚಿಕೊಳ್ಳಲು ಬಡ ಬಿಲ್ಲಿಯನ್ನು ಶಿಬಿರ ಸ್ಥಳಕ್ಕೆ ಅಟ್ಟಿಬಿಟ್ಟಿತು.

ಸಂಜೆಯಾಗುವಷ್ಟರಲ್ಲಿ ಪೆರಾಲ್ಟ ಮತ್ತೊಂದು ನಾಯಿ ತಂದ. ಅದೂ ಹಸ್ಕಿ. ತೆಳ್ಳಗಿನ ನಿಲುವು. ಮುಖದ ಮೇಲೆ, ಯುದ್ಧದಿಂದ ಮರಳಿದ ಸೈನಿಕ ನಂತೆ ಕಲೆಗಳು. ಕಣ್ಣು ಒಂದೇ. ಅದೆ ಪರಾಕ್ರಮದ ದ್ಯೋತಕವೆನ್ನುವಂತೆ ಥಳಥಳ ಹೊಳೆಯುತ್ತಿತ್ತು. ಯಾರನ್ನೂ ಬಲಿಹಾಕಿಕೊಳ್ಳುವ ತೇಜವದರದು ! ಡೇವ್ಹದಂತೆ ಅದು ಏನೂ ಬೇಡಲಿಲ್ಲ. ಯಾರಿಗೂ ಕೊಡಲಿಲ್ಲ. ತನ್ನ

ಮನಃಸ್ಥೈರ್ಯದಿಂದ ಸಾವಕಾಶ ಅದು ಉಳಿದ ನಾಯಿಗಳಲ್ಲಿ ಬಂದು ಕೂಡಿ ದಾಗ ಸ್ಪಿಟ್ಝ್ ಸಹ ಅದರ ಗೊಡವೆಗೆ ಬರಲಿಲ್ಲ. ಅವರದೊಂದು ವೈಶಿಷ್ಟ್ಯ. ಬಕ್‌ನಿಗೂ ತೀವ್ರ ಹೊಳೆಯಲಿಲ್ಲ. ತನ್ನ ಕುರುಡು ಕಣ್ಣೆಡೆಗೆ ಯಾರನ್ನೂ ಬರಗೊಡುತ್ತಿರಲಿಲ್ಲ ! ತಿಳಿಯದಲೆ ಈ ಪ್ರಮಾದವೊಂದು ಬಕ್‌ನಿಂದ ಘಟಿಸಿ ಹೋಯಿತು. ಅದಕ್ಕಾಗಿ ಸೊಲೆಕ್ಸಿನಿಂದ ಮೂರು ಇಂಚು ಉದ್ದ ಹಲ್ಲಿನ ಗಾಯಹೊಂದಬೇಕಾಯಿತು ! ಅಂದಿನಿಂದ ಆ ಕುರುಡು ಕಣ್ಣಿನ ಬಳಿ ಹೋಗುವದನ್ನು ಅತಿ ಜಾಗರೂಕತೆಯಿಂದ ತಪ್ಪಿಸಿತು. ಜೀವಮಾನವಲ್ಲೆಲ್ಲ ಅಂತಹ ಪೇಚೂ ಒಂದು ಪರಿಹಾರವಾದಂತಾಯಿತು. ಡೇವ್ನಿನಂತೆ, ಯಾರೂ ತನ್ನ ಬಳಿ ಹಾಯಕೂಡದೆಂದು ಅದರ ಇಚ್ಛೆ. ಮುಂದೆ ಅದಕ್ಕೆ ಬೇರೆ ಮಹತ್ವಾಕಾಂಕ್ಷೆ ಬಂದವು. ಇರಲಿ.

ಆ ಇರುಳು ಬಕ್‌ನಿಗೆ ನಿದ್ರೆಬರುವದು ಒಂದು ಸಮಸ್ಯೆಯಾಗಿಯೇ ಪರಿಣಮಿಸಿತು. ಡೇರೆಯಲ್ಲಿ ಮೇಣಬತ್ತಿಯ ಬೆಳಕು ಬಿದ್ದು ಬೆಚ್ಚಗಿತ್ತು. ಬಕ್ ಒಳಗೆಹೋಗಿ ಮಲಗಲು ಹವಣಿಸಿದಾಗ ಪೆರಾಲ್ಟ, ಫ್ರಾಂಕೊಯಿಸ ಇಬ್ಬರೂ ಅಡಗಿಯ ಸಾಮಾನು ಅದರ ಮೇಲೆ ತೂರಾಡಿ ಹೊರಗಟ್ಟಿಬಿಟ್ಟರು. ಮತ್ತೆ ಚಳಿಯಲ್ಲಿ ಬೀಳುವದೇ ಕರ್ಮವಾಯಿತು ! ಹಗಲಿನ ಗಾಯ, ಕೊರೆಯುವ ಚಳಿಯ ಮೂಲಕ ಅದಕ್ಕೆ ವಿಶೇಷ ವೇದನೆ ಉಂಟುಮಾಡತೊಡಗಿತು. ಓಮದ ಮೇಲೆಯೆ ಮಲಗಲು ಹವಣಿಸಿತು. ಆದರೆ ಮಂಜು ಅದನ್ನು ಓಡಿಸಿತು. ಅತಿ ದುಃಖಿಯಾಗಿ ಎಲ್ಲ ಡೇರೆಗಳ ಬಳಿ ಸುಳಿದಾಡಹತ್ತಿತು. ಆದರೆ ಹೋದಲ್ಲೆಲ್ಲ ಚಳಿಯೇ. ಅಲ್ಲಲ್ಲಿ ಅನಾಗರಿಕ ನಾಯಿಗಳು ಅದರ ಮೇಲೆ ಏರಿಬಂದವು. ಆದರೆ ತನ್ನ ಶೌರ್ಯದಿಂದ, ಗತ್ತುಗಾರಿಕೆಯಿಂದ (ಈಗ ರಕ್ತಗತವಾಗಿಬಿಟ್ಟಿತ್ತು) ಪಾರಾಯಿತು-

ಕೊನೆಗೆ ಅದಕ್ಕೆ ಒಂದು ವಿಚಾರ ಹೊಳೆಯಿತು. ತನ್ನ ಪಂಗಡದ ಪ್ರಾಣಿಗಳ ಗತಿಯನ್ನೇ ನಿರೀಕ್ಷಿಸಬೇಕೆಂದು ನಿರ್ಧರಿಸಿತು. ಆಶ್ಚರ್ಯ ! ಅವು ಯಾವವೂ ಅಲ್ಲಿರಲಿಲ್ಲ ! ದೊಡ್ಡ ಡೇರೆಗೆ ಹೋಗಿ ನೋಡಿ ತಿರುಗಿ ಬಂದಿತು. 'ಅವು ಡೇರೆಯಲ್ಲಿರಬಹುದೊ ಹೇಗೆ ? ಸಾಧ್ಯವಿಲ್ಲ. ಒಳಗೆ ಅವನ್ನು ಬಿಡುವವರಾರು ? ಹಾಗಾದರೆ ಇದ್ದುವೆಲ್ಲಿ ?' ಎಂದು ಆಲೋಚಿಸುತ್ತ ಬಕ್ ಮೋರೆ ಒಣಗಿಸಿಕೊಂಡು, ಥರಥರ ನಡುಗುತ್ತ, ಅನಾಥಾವಸ್ಥೆಯಲ್ಲಿ ನಿರುದ್ದಿಶ್ಯವಾಗಿ

ಡೇರೆಯ ಸುತ್ತಲೂ ಅಲೆದಾಡಹತ್ತಿತು. ಒಮ್ಮಿಂದೊಮ್ಮೆಲೇ ಅದರ ಕಾಲು ಬ[illegible] ಹಿಮಕುಸಿದು ಒಳಗೆ ಸಿಕ್ಕಿತು. ಕಾಲ ಕೆಳಗೆ ಏನೊ ಸಂದಾಡಿದಂತಾಯಿತು. ಅದು ಹಾರಿಬಿದ್ದು, ಹೆದರಿ ಬೊಗಳಿತು. ಆದರೆ ಗೆಳೆತನದ ಧ್ವನಿಕೇಳಿ ಯಾರೆಂದು ನೋಡಲು ಅನುವಾಯಿತು. ಮೂಗಿಗೆ ಬೆಚ್ಚನೆ ಹವೆ ತಾಕಿತು. ಹಿಮದ ಕೆಳಗೆ ಬಿಲ್ಲಿ ಚೆಂಡಿನಂತೆ ಸುರುಳಿಯಾಗಿ ಬಿದ್ದುಕೊಂಡಿತ್ತು. ವಿಶಿಷ್ಟ ಬಗೆಯಾಗಿ ಅದು ತನ್ನ ಆದರಭಾವ ವ್ಯಕ್ತಪಡಿಸಿತು. ಮುಂಬರುವ ಒಪ್ಪಂದದ ಕುರುಹೆಂದು ಈಗಲೇ ಬಿಲ್ಲಿ ಬಕ್‌ನ ಮೋರೆ ನೆಕ್ಕತೊಡಗಿತು—ತನ್ನ ಒದ್ದೆ ನಾಲಗೆಯಿಂದ !

ಇನ್ನೊಂದು ಪಾಠ. 'ಎಲ್ಲರೂ ಹೀಗೆ ಮಲಗಿದರೆ ?' ಎನ್ನುತ್ತ ಬಕ್, ಅತಿ ಪ್ರಯಾಸಬಟ್ಟು ಹಿಮಪ್ರದೇಶದಲ್ಲಿಯೆ ಕೆದರಿ ಒಂದು ಒಳ್ಳೆ ಹೊಂಡ ಮಾಡಿಕೊಂಡಿತು. ತನ್ನ ಮೈಕಾವಿನಿಂದಲೇ ಬೆಚ್ಚಗೆನಿಸಿ ನಿದ್ರೆಮಾಡ ತೊಡಗಿತು. ಇಡೀ ದಿನ ದಣಿವು ಆಗಿದ್ದರಿಂದ ಕೂಡಲೆ ಅದಕ್ಕೆ ಗಾಢನಿದ್ರೆ ಆವರಿಸಿತು. ಆಗೀಗ ದುಃಸ್ವಪ್ನ ಬಿದ್ದಾಗ ಒವ್ ಎಂದು ಬೊಗಳುತ್ತಿತ್ತು.

ಶಿಬಿರದ ಜನ ಎಚ್ಚರಿಸುವವರೆಗೆ ಅದು ಕಣ್ಣು ಕೂಡ ತೆರೆಯಲಿಲ್ಲ. ಮೊದ ಮೊದಲಿನಂತೆ ತಾನೆಲ್ಲಿರುವೆನೆಂಬ ಅರಿವೇ ಆಗಲಿಲ್ಲ. ಇರುಳೆಲ್ಲ ಹಿಮ ಸುರಿದಿತ್ತು. ತಾನು ಪೂರ್ಣ ಹುಗಿದೇ ಹೋಗಿದ್ದೇನೆಂದು ಹಿಂದುಗಡೆ ತಿಳಿಯಿತು. ಹಿಮಭಿತ್ತಿಗಳು ಅದನ್ನು ಸುತ್ತುಕಡೆಯಿಂದ ಒತ್ತುತ್ತಿದ್ದವು. ಅದಕ್ಕೆ ವಿಪರೀತ ಹೆದರಿಕೆಯುಂಟಾಯಿತು. ಸಾಕುಪ್ರಾಣಿಗೆ ಆಕಸ್ಮಿಕವಾಗಿ ಕಾಡಿನ ಅನುಭವ ಉಂಟಾದಂತೆ ! ನಿಜಕ್ಕೂ ಅದು ನಾಗರಿಕ ನಾಯಿಯೇ ಸೈ. ಬರಿ ಸಾಕುನಾಯಿಯಷ್ಟೇ ಅಲ್ಲ. ಒಂದು ಕಾಲಕ್ಕೆ ಅತಿ ದೌಲತ್ತಿನಲ್ಲಿ ಮೆರೆದದ್ದೂ ಇಹುದು. ಅಂತೇ ಅದಕ್ಕೆ ಬಲಿಹಾಕುವದೆಂದರೇನೆಂಬ ಕಲ್ಪನೆ ಎಷ್ಟೂ ಬಂದಿರಲಿಲ್ಲ. ಸಹಜವಾಗಿ ಉಂಟಾದ ಹೆದರಿಕೆಯಂತೂ ಇದಲ್ಲ ! ಅದರ ಇಡೀ ಶರೀರದ ಸ್ನಾಯುಗಳೆಲ್ಲ ಅನಿರೀಕ್ಷಿತವಾಗಿ ಆಕುಂಚನ ಹೊಂದಿದವು. ತೀರ ಸ್ವಾಭಾವಿಕವಾಗಿ ಎಂದೂ ಹೇಳಬಹುದು. ಅದರ ಕೊರಳು ಹಾಗೂ ಹೆಗಲ ಮೇಲಿನ ಕೂದಲು ನೆಟ್ಟಗಾದವು. ಭಯಾನಕವಾಗಿ ಒವ್ ಎಂದು ಬೊಗಳಿ ಕ್ರಮೇಣ ಗುರಗುಟ್ಟಿ ಹಗಲಿನಲ್ಲಿ ತೂರಿಹೋಗುವದೇನೊ ಎಂಬಂತೆ ಟಣ್ಣನೆ ಹಾರಿತು. ಮಂಜು ಅವಿರತವಾಗಿ ಸುರಿದು ಮೋಡದಂತೆ ಸುತ್ತಲೂ

ಹರಡಿತು. ಹಾರಿ ನೆಲಕ್ಕೆ ಮತ್ತೆ ಬಂದಾಗ ಬಿಳಿ ಶಿಬಿರವೆಲ್ಲ ತನ್ನ ಮುಂದೆ ಮೊದಲಿನಂತೆ ಇದ್ದುದು ಕಂಡುಬಂದಿತು. ತಾನೆಲ್ಲಿದ್ದೇನೆಂಬ ಪ್ರಜ್ಞೆ ಮೂಡಿತು. ಹಿಂದಿನ ನೆನಪಿನ ಸರಪಳಿ ಸಮಗ್ರವಾಗಿ ಕಣ್ಣು ಮುಂದೆ ಕಾಣಿಸಿಕೊಂಡಿತು. ಮ್ಯಾನುಯೆಲ್‌ನೊಡನೆ ತಾನು ಅಲೆದಾಡಹೋದುದು, ಹಿಂದಿನ ರಾತ್ರಿ ಬರ್ಫಿನಲ್ಲಿಯೇ ಹೋರು ಕೊರೆದು ಮಲಗಿದುದು ನಿಚ್ಚಳವಾಗಿ ನೆನಪಾದವು.

ಫ್ರ್ಯಾಂಕೊಯಿಸನ ಗದ್ದರಿಸುವ ದನಿ ಕೇಳಿದೊಡನೆ ಅವನು ಅಲ್ಲಿಗೇ ಬರುವನೆಂದು ಅದಕ್ಕೆ ಅನಿಸಿತು.

ನಾಯಿಗಳ ವಾಹಕ ಪೆರಾಲ್ಟನಿಗೆ ನುಡಿದ: "ಹೇಳುವದೇನು ? ಬಕ್ ಬಲು ಬುದ್ಧಿ ಶಾಲಿ. ಹಾಹಾ ಎನ್ನುವದರಲ್ಲಿ ಪರಿಸ್ಥಿತಿಗೆ ಹೊಂದಿಕೊಳ್ಳುವದು."

ಪೆರಾಲ್ಟನು ಶ್ರೀಮದ್ ಗಾಂಭೀರ್ಯದಿಂದ ತಲೆಕೊಡಹಿದ. ಕಾನಡಾ ಸರಕಾರಕ್ಕಾಗಿ ಮಹತ್ವದ ಕಾಗದ ಪತ್ರಗಳನ್ನು ಒದಗಿಸಲು ಅವನು ಅತ್ಯುತ್ತಮ ನಾಯಿಗಳನ್ನು ಹುಡುಕಿ ತರಬೇಕಾಗಿತ್ತು. ಅದಕ್ಕಾಗಿ ಅವನು ಅತಿ ಪರಿಶ್ರಮಿಸುತ್ತಿದ್ದ. ಯೋಚನಾಪರನೂ ಆಗಿದ್ದ. ಆಯಿತು. ಬಕ್‌ನಂಥ ರಾಜ ನಾಯಿ ದೊರೆತದ್ದಕ್ಕೆ ಅವನಿಗಾದ ಆನಂದ ಅಷ್ಟಿಷ್ಟಲ್ಲ.

ಒಂದು ತಾಸಿನೊಳಗಾಗಿ ಮತ್ತೆ ಮೂರು ಹಸ್ಕಿ ನಾಯಿಗಳನ್ನು ದೊರಕಿಸಿದ್ದಾಯಿತು. ಒಟ್ಟು ಒಂಬತ್ತಾದವು. ಮುಂದೆ ಹದಿನೈದು ನಿಮಿಷಗಳೊಳಗಾಗಿ ಎಲ್ಲವನ್ನು ಬಂಡಿಗೆ ಸಜ್ಜುಗೊಳಿಸಿದರು. ಡಿಯಾ ಕ್ಯಾನನ್ನಿನೆಡೆಗೆ ಪರಿವಾರ ಹೊರಟಿತು. ತಾನೂ ಹೊರಡುವದೆಂದು ತಿಳಿದಾಗ ಬಕ್‌ನಿಗೆ ಆನಂದವಾಯ್ತು. ಮುಂದಿನ ಕಾರ್ಯ ಕಠಿಣವಾಗಿದ್ದರೂ ಬಕ್ ಎಷ್ಟೂ ಅದನ್ನು ತಿರಸ್ಕರಿಸಲಿಲ್ಲ. ಇಡೀ ಪರಿವಾರದ ವಾತಾವರಣದಲ್ಲಿ ಕಂಡು ಬಂದ ಉತ್ಸಾಹ ನೋಡಿ ಅದೂ ಹುರುಪಿಗೆದ್ದಿತು. ಮುಖ್ಯವಾಗಿ ಡೇವ್ಹ್ ಸೊಲೆಕ್ಸರಲ್ಲಿ ಉಂಟಾದ ಬದಲಾವಣೆ ನೋಡಿದ ಮೇಲಂತೂ ಬಕ್‌ನಿಗೆ ಇನ್ನಿಷ್ಟು ಅಚ್ಚರಿ ಎನಿಸಿತು. ಅವು ಹೊಸ ನಾಯಿಗಳೇನೊ ಅಹುದು. ಅದರೂ ಜೀನು ಹಾಕಿದಾಗ ಹೊಸ ಕೆಲಸಕ್ಕೆ ಒಡನೆಯೇ ಹೊಂದಿಕೊಂಡವು. ಎಲ್ಲ ಅಲಕ್ಷ್ಯಭಾವ, ಪರಕೀಯತೆ ಅವುಗಳಲ್ಲಿ ಈಗ ಕಾಣುವಂತೆಯೇ ಇರಲಿಲ್ಲ. ಏನು ಚಟುವಟಿಕೆ ! ಎಂಥ ಜಾಗ್ರತಿ ! ಕಾರ್ಯ ಸುಗಮವಾಗಲಿ ಎಂದೇ ಎಲ್ಲರ ಹಾರೈಕೆ ಇದ್ದಂತೆ ಶ್ರದ್ಧೆ ಮೂಡಿತ್ತು. ವಿಲಂಬವಾಗಲಿ, ಗೊಂದಲಗೇಡಿತನ

ವಾಗಲಿ ಏನೂ ತಲೆದೋರಕೂಡದೆಂದು ಅವು ಸಂಕಲ್ಪಿಸಿದ್ದವು. ಕೆಲಸಕ್ಕೆ ವ್ಯತ್ಯಯ ಉಂಟಾಗಲಿಲ್ಲ. ಪ್ರವಾಸದಲ್ಲಿ ಯಾವ ರೀತಿಯಲ್ಲೂ ವೈ ಉಳಿಸಿ ಕೊಳ್ಳದೆ ಕಾರ್ಯತತ್ಪರರಾಗಿ ಮುನ್ನಡೆ ಇಡುವದೆ ಎಲ್ಲರ ಧ್ಯೇಯವಾಗಿತ್ತು. ಜೀವನದಲ್ಲಿ ಇದೊಂದೇ ರಸನಿಮಿಷವೆಂದು ಎಲ್ಲ ಪ್ರಾಣಿಗಳು ತಿಳಿದಿದ್ದವು.

ಡೇವ್ಹ್ ಆಯಕಟ್ಟಿನಲ್ಲಿ ಹೂಡಿರುತ್ತಿತ್ತು. ಅದರ ಮುಂದೆ ಬಕ್ ಎಳೆ ಯುವದು. ಅನಂತರ ಸೊಲೆಕ್ಸ; ಪರಿವಾರದ ಇನ್ನುಳಿದ ನಾಯಿಗಳನ್ನು ಅತ್ತಿತ್ತ ಜೋಡಿಸಿದ್ದರು. ಅವೆಲ್ಲ ಒಂದು ಸಾಲಿನಲ್ಲಿದ್ದು ಸ್ಪಿಟ್ಝಸಿಗೆ ಮುಂದಾಳುತನ ಸಲ್ಲಿಸಿದ್ದವು.

ಡೇವ್ಹ್ ಮತ್ತು ಸೊಲೆಕ್ಸರ ನಡುವೆ ಬಕ್‌ನನ್ನು ಹೂಡಿದ್ದರ ಉದ್ದೇಶ ವೆಂದರೆ ಆ ಎರಡೂ ನಾಯಿಗಳಿಂದ ಅದಕ್ಕೆ ರೀತಿ ನೀತಿಗಳು ಅರ್ಥವಾಗ ಲೆಂಬದು. ಬಕ್ ಬುದ್ಧಿಶಾಲಿ ಅಹುದು. ಆದರೆ ಅದಕ್ಕೆ ಕಲಿಸುವ ಅವುಗಳೂ ಬಲು ಚುರುಕು, ಅಲ್ಲದೆ ಕಷ್ಟಸಹಿಷ್ಣು.

ಸರಿಯಾಗಿ ಜೀನು ಹಾಕಿ ಹೊರಟ ಆ ದಿನ ನಲವತ್ತು ಮೈಲು ಪ್ರವಾಸವಾಯ್ತು. ಮರುದಿನ, ಅದರ ಮರುದಿನ ಇನ್ನೂ ಹೆಚ್ಚು ಮಾರ್ಗ ಕ್ರಮಿಸಿತು. ನಾಯಿಗಳಿಗೆ ಶ್ರಮವೂ ಅನಿಸಿತು. ನಿಯಮದಂತೆ ಪೆರಾಲ್ಟ ದಳದ ಮುಂದೆಯೇ ಇದ್ದ. ಮೊಳೆಯ ಬೂಟುಹಾಕಿಕೊಂಡು ಹಿಮವನ್ನು ತುಳಿದು ಸರಿಸುತ್ತ ಸಾಗುವದೇ ಅವನ ಕೆಲಸ. ಆಗೀಗ ಫ್ರಾಂಕೊಯಿಸ್ ಅವನ ಸ್ಥಳ ವ್ಯಾಪಿಸಿದರೂ ಅನೇಕ ಸಲ ಪುರಸ್ಕರ್ತ ಪೆರಾಲ್ಟನೆ. ಹಿಮದ ಮಾರ್ಗದಲ್ಲಿ ದಳವನ್ನು ಮುನ್ನಡೆಸುವ ಕಲೆ ತನಗೆ ತಿಳಿದಷ್ಟು ಬೇರಾರಿಗೂ ಸಾಧ್ಯವಿಲ್ಲ ಎಂದು ಅವನಿಗೆ ಒಂದು ಬಗೆಯ ಜಂಭ. ನಿಜಕ್ಕೂ ಹಿಮ ಮಾರ್ಗದ ಅಡೆತಡೆಗಳ, ನಿವಾರಣೋಪಾಯಗಳು ಗೊತ್ತಿಲ್ಲದೆ ಪ್ರವಾಸ ಮಾಡುವದು ಕಠಿಣ. ಎಲ್ಲೆಡೆಗೂ ಹಿಮವಿದೆಯೆಂದು ಅನಿಸುತ್ತಿದ್ದರೂ ನೀರು ಹರಿಯುತ್ತಿದ್ದಲ್ಲಿ ಹಿಮವೇ ಇರುತ್ತಿರಲಿಲ್ಲ!

ದಿನೇ ದಿನ ನಿರರ್ಗಳವಾಗಿ ಬಕ್ ಇಂಥ ದಳದೊಡನೆ ಗುದುಮುರಿಗೆ ಹಾಕುತ್ತ ನಡೆದಿತ್ತು. ಇರುಳು ಮಾತ್ರ ಶಿಬಿರದ ಪರಿವಾರಕ್ಕೆ ವಿಶ್ರಾಂತಿ. ಮತ್ತೆ ಮರುದಿನ ಸೂರ್ಯೋದಯದ ಹೊಂಬಿಸಿಲು ಬಿದ್ದ ವೇಳೆಗೆ ಪ್ರವಾಸ. ಮುಂದೆ ಕ್ರಮಿಸಬೇಕಾದ ಎಷ್ಟೋ ಮೈಲುಗಳ ನಿಡಿದಾದ ದಾರಿ! ಕತ್ತಲೆ

ಯಾದೊಡನೆ ಸಾಮಾನ್ಯವಾಗಿ ಡೇರೆ ಹೊಡೆಯುತ್ತಿದ್ದರು. ನಾಯಿಗಳು ತಮ್ಮ ಪಾಲಿನ ಮಾಂಸಾಹಾರ ಮುಗಿಸುತ್ತಿದ್ದವು. ಹಿಮಪ್ರದೇಶದಲ್ಲಿ ಮಲಗುತ್ತಿದ್ದವು. ಬಕ್ ಮಹಾ ಕೂಳಬಕ್ಕ. ಒಂದೂವರೆ ಪೌಂಡಿನಷ್ಟು ಸಾಲಮನ್ ಮೀನುಗಳು ಅದರ ಬೃಹದ್ ಉದರಕ್ಕೆ ಎಲ್ಲಿಯೂ ಹತ್ತುತ್ತಿರಲಿಲ್ಲ! ಎಂದೂ ಅದಕ್ಕೆ ಹೊಟ್ಟೆ ತುಂಬುವಷ್ಟು ಆಹಾರ ದೊರೆಯಲಿಲ್ಲ. ಹಸಿವೆಯ ಬಾಧೆ ಎಂದೂ ಅದನ್ನು ಬಿಡಲಿಲ್ಲ. ಆದರೆ ಉಳಿದ ನಾಯಿಗಳ ತೂಕವೇ ಕಡಿಮೆ. ಅಂತೆ ಆಹಾರವೂ ಅವುಗಳಿಗೆ ಅಷ್ಟು ಬೇಕಾಗುತ್ತಿರಲಿಲ್ಲ. ಹಿಮ ಪ್ರದೇಶಕ್ಕಾಗಿಯೇ ಅವು ಜನ್ಮತಳೆದಂತಿದ್ದವು. ಅವುಗಳಿಗೆ ಪ್ರತಿಯೊಂದಕ್ಕೆ ಒಂದು ಪೌಂಡು ಮೀನು ದೊರೆತರೂ, ಅಷ್ಟರಿಂದಲೇ ಸಂತೃಪ್ತವಾಗಿ ಆರೋಗ್ಯಕರವಾಗಿ ಬಾಳುತ್ತಿದ್ದವು.

ಬಕ್‌ಗೆ ಮೊದಲಿನಂತೆ ಚಂಡಿತನ ಉಳಿಯಲಿಲ್ಲ. ಅದೇ ಬೇಕು, ಇದೇ ಬೇಕು ಎನ್ನುವ ಆಸೆಯೂ ಹಿಂಗಿದಂತಾಯಿತು. ತಿನ್ನುವಾಗಲೂ ಅದು ಅತಿ ಅಚ್ಚುಕಟ್ಟು. ಗಬಗಬ ತಿನ್ನುವುದು ಕೇಳಬೇಡಿ. ಆದರೆ ಉಳಿದುವು ಹಾಗಲ್ಲ! ತಮ್ಮ ಆಹಾರ ತೀವ್ರ ತೀರಿಸಿ ಬಕ್‌ನ ಉಳಿದ ಆಹಾರಕ್ಕೆ ಬಾಯಿ ಹಾಕುತ್ತಿದ್ದವು. ಉಳಿಸಿಕೊಳ್ಳುವುದಾದರೂ ಹೇಗೆ? ಎರಡು ಮೂರು ನಾಯಿಗಳೊಡನೆ ಆಹಾರ ಉಳಿಸಿಕೊಳ್ಳಲು ಅದು ಹೋರಾಡುತ್ತಿರುವಾಗ ಬೇರೊಂದು ನಾಯಿ ಯಾವ ಮಾಯೆಯಿಂದಲೋ ಬಂದು ತನ್ನ ಗಂಟಲಿಗೆ ಆ ಮೀನುಗಳನ್ನು ಹಾಕಿಕೊಳ್ಳುತ್ತಿತ್ತು. ಇದಕ್ಕೆ ಪ್ರತಿಕ್ರಿಯೆಯೆಂದು ಅಂದಿನಿಂದ ಬಕ್ ತಾನೂ ಅವಸರ ಅವಸರವಾಗಿ ತಿನ್ನುವ ರೂಢಿ ಮಾಡಿಕೊಂಡಿತು. ಈ ರಭಸದಲ್ಲಿ ಒಮ್ಮೊಮ್ಮೆ ಅದಕ್ಕೆ ತನ್ನ ಪಾಲಿನ ಮಾಂಸವಾವುದು, ಬೇರೆಯವರದಾವುದು—ಲಕ್ಷ್ಯಕ್ಕೇ ಬರುತ್ತಿರಲಿಲ್ಲ! ಎಲ್ಲ ನಿರೀಕ್ಷಿಸಿ ಅಪೂರ್ವ ತರಬೇತಿಯನ್ನು ಪಡೆಯಿತು. ಪೆರಾಲ್ಟ ಬೇರೆಡೆಗೆ ಬೆನ್ನು ತಿರುವಿದ ಸಂಧಿ ಸಾಧಿಸಿ ಹೊಸದಾಗಿ ಬಂದ ಪೈಕ್ ಎಂಬ ಜಾಣ ಹಾಗೂ ಕಳ್ಳ ನಾಯಿ ಮಾಂಸದ ತುಂಡು ಕದ್ದಾಗ ಮರುದಿನ ಬಕ್ ಅದೇ ಕೆಲಸಕ್ಕೆ ತಾನೂ ಅಣಿಯಾಗಿ ಕದ್ದಿತು. ಆಗ ದೊಡ್ಡದೊಂದು ಕೋಲಾಹಲವೆದ್ದಿತು. ನಿಜವಾಗಿಯೂ ಕದ್ದವರಾರೆಂಬುದು ಗೊತ್ತಾಗದೆ ಎಬಡ ಡಬ್ ಎಂಬ ನಾಯಿಯ ಮೇಲೆ ಸಂಶಯ ಬಂದಿತು. ಅದು ನಿರಪರಾಧಿಯೇನೂ ಅಹುದು. ಆದರೆ ಬಕ್‌ನ ಚಾಣಾಕ್ಷತನಕ್ಕಾಗಿ ಅದು ಶಿಕ್ಷೆಗೆ ಪಾತ್ರವಾಯಿತು!

ಉತ್ತರ ಧ್ರುವ ಪ್ರದೇಶದ ವಿಚಿತ್ರ ವಾತಾವರಣದಲ್ಲಿ ಕಳೆದ ಈ ಕಲಿ ಅಪ್ರತಿಮವಾಗಿ ಸಾಧಿಸಿಕೊಂಡದ್ದಕ್ಕೆ ಜೀವಿಸಲು ಸಮರ್ಥವಾಯಿತು. ಪರಿಸ್ಥಿತಿಗೆ ಹೊಂದಿಕೊಳ್ಳುವ ಗುಣ ಬಕ್‌ನಲ್ಲಿಯೇ ಇದೆ ಎಂದು ಬೆರಳು ಮಾಡಿ ತೋರಿಸುವಂತಾಯ್ತು ! ಕ್ಷಣಕ್ಕೊಂದು ಬಣ್ಣ ಬದಲಿಸುವ ಗತ್ತುಗಾರಿಕೆ ಇರದಿದ್ದರೆ ನಾಳೆ ಸಾಯುವ ಪ್ರಾಣಿ ಇಂದೇ ಪ್ರಾಣ ಕಳೆದುಕೊಳ್ಳುವದು ಸ್ಪಷ್ಟ. ಇದರಿಂದ ನೈತಿಕ ಅಧಃಪತನವಾಗುವದೆಂದು ಹೇಳಬಹುದಾದರೂ, ಜೀವಿಸುವದೇ ಅತಿ ಕಠಿಣವಾಗಿ ಪರಿಣಮಿಸಿದಾಗ ಪ್ರಾಮಾಣಿಕತೆ ನಗೆಗೇಡೆನಿಸುವದ ಅಚ್ಚರಿಯಲ್ಲ ! ದಕ್ಷಿಣ ಪ್ರದೇಶಗಳಲ್ಲಿ ಈ ಸದಾಚಾರಕ್ಕೆ ಸಾಕಷ್ಟು ಮರ್ಯಾದೆ ಎನಿಸಿತ್ತು; ಬಾಂಧವ್ಯಭಾವನೆ, ಹೆರವರ ವಸ್ತು ಮುಟ್ಟಲಾಗದೆಂಬ ಕಲ್ಪನೆಗಳಿಗೆ ಅಲ್ಲಿಯೇ ಎಡೆ. ಆದರೆ ಟೋಣಪೆ—ವಿಷದಂತದ ಕಾನೂನೇ ಪ್ರಬಲವಾಗಿರುವ ಹಿಮಪ್ರದೇಶದಲ್ಲಿ ನ್ಯಾಯದಿಂದ ನಡೆಯುವವ ಮೂರ್ಖನೇ. ಅವನಿಗೆ ಏಳ್ಗೆ ಕನಸು; ಬರಿ ಕನಸು !

ಇದೆಲ್ಲ ವೇದಾಂತ ಬಕ್‌ನಿಗೆ ಅರ್ಥವಾಗಲಿಲ್ಲ ಎಂದು ಅರ್ಥವಲ್ಲ. ಆದರೆ ಅದು ಪರಿಸ್ಥಿತಿಗೆ ಅನುಗುಣವಾಗಿ ಬೆಳೆಯಿತು. ಹೊಸ ಪರಿಸರದಲ್ಲಿ ಅದಕ್ಕೆ ಹಳೆಯ ರೀತಿ ನೀತಿ ಸರಿಕಾಣಲಿಲ್ಲ; ಅಷ್ಟೆ. ಮಾಡುವದೇನು ?

ಈ ಎಲ್ಲ ದಿನ ಎಂತಹ ವಿಪತ್ತು ತಲೆದೋರಿದರೂ ಬಕ್ ತನ್ನ ಹೋರಾಟದ ಪ್ರವೃತ್ತಿಯನ್ನು ಬಿಡುತ್ತಿರಲಿಲ್ಲ. ಆದರೆ ಟೋಣಪೆ ಹಿಡಿದು ಅಧಿಕಾರಾರೂಢನಾದ ಆ ಕೆಂಪು ಸ್ವೆಟರಿನ ಮನುಷ್ಯ ಅದಕ್ಕೆ ಹೊಸ ಕಾನೂನುಗಳನ್ನೇ ಕಲಿಸಿದ್ದ. ಕಾಡಿನ ಜೀವನಕ್ಕೆ ಸಂಬಂಧಿಸಿರುವವು. ನಾಗರಿಕತೆಯ ಕಲ್ಪನೆ ಇದ್ದ ಅದು ನ್ಯಾಯಾಧೀಶ ಮಿಲ್ಲರನ ಚಬುಕಕ್ಕೆ ಚಕಾರ ಶಬ್ದ ಎತ್ತುತ್ತಿರಲಿಲ್ಲ. ಆದರೆ ಮೊದಲಿನ ನ್ಯಾಯ ಬುದ್ಧಿಗೆ ಈಗಿನ ಹೊಸ ಕಾನೂನುಗಳಲ್ಲಿ ಸ್ಥಾನವೇ ದೊರಕಲಿಲ್ಲ. ಪ್ರಾಣ ಉಳಿಸಿಕೊಳ್ಳುವದೇ ಈಗ ಮಿಗಿಲು ಎನಿಸಿತು ಅದಕ್ಕೆ ! ಕ್ಷಣಿಕ ಸುಖಕ್ಕಾಗಿ ಅದು ಕದಿಯುತ್ತಿರಲಿಲ್ಲ. ಆದರೆ ಗೇಣು ಹೊಟ್ಟೆಯ ಪಾಡಿಗಾಗಿ ಈ ಪರಿ ಕೆಳಗಿಳಿಯಬೇಕಾಯ್ತು. ಬಹಿರಂಗವಾಗಿ ಅದು ಕಳವಿಗೆ ಮನಸ್ಸು ಮಾಡಲಿಲ್ಲ. ಆದರೆ ಗುಟ್ಟಿನಿಂದ ಕದಿಯುತ್ತಿತ್ತು; ಠಕ್ಕುತನದಿಂದ ಕದಿಯುತ್ತಿತ್ತು. ಟೋಣಪೆ, ವಿಷದಂತಕ್ಕೆ ಅಷ್ಟು ಆದರ ಅದರದು. ಒಟ್ಟಿನಲ್ಲಿ,

ಹೀಗೆ ಮಾಡದಿರುವವರಿಂದ ಹಾನಿ ಎಂದು ಕಂಡರೆ ಅದು ಹಾಗೆ ಮಾಡಬೇಕಾಗುತ್ತಿತ್ತು ! ನ್ಯಾಯಾನ್ಯಾಯಗಳೆಲ್ಲಿ ?

ಅದರ ಬೆಳವಣಿಗೆಗೆ ಅತಿ ರಭಸ. ಅದರ ಸ್ನಾಯುಗಳು ಕಬ್ಬಿಣದಷ್ಟು ಬಿರುಸಾದವು. ಸರ್ವಸಾಮಾನ್ಯ ನೋವು ಉಂಟಾದರೆ, ಅಪಘಾತಗಳು ಸಂಭವಿಸಿದರೆ ಅದು ಲಕ್ಷಿಸುತ್ತಿರಲೇ ಇಲ್ಲ. ಆಂತರಿಕ ಹಾಗೂ ಬಹಿರಂಗವಾಗಿ ಅದು ತನ್ನ ಇತಿ-ಮಿತಿಯಲ್ಲಿಯೇ ಲೆಕ್ಕದಲ್ಲಿಯೇ, ಇರುತ್ತಿತ್ತು. ಅಪಚನ ತಂದೊಡ್ಡಲಿ, ಬೇಕಾದಷ್ಟು ಹೀನವಾಗಿರಲಿ, ಎಂಥ ಆಹಾರವಿದ್ದರೂ ಅದು ತಿನ್ನುತ್ತಿತ್ತು. ಒಮ್ಮೆ, ಗಂಟಲಿನಿಂದಿಳಿದರೆ ಸಾಕು, ಪಾಚಕಾಂಗಳೆಲ್ಲ ಸಹಜವಾಗಿ ತಮ್ಮ ಕಾರ್ಯ ನಿರ್ವಹಿಸುತ್ತಿದ್ದವು. ರಕ್ತವು ಎಲ್ಲ ರಕ್ತನಾಳಗಳಿಗೂ ಪದ್ಧತಿಯಂತೆ ಹರಿಯುತ್ತಿತ್ತು. ನರಮಂಡಲವೂ ಬಲಶಾಲಿಯಾಗುತ್ತಿತ್ತು. ಅದರ ದೃಷ್ಟಿ, ಶ್ರವಣ ಬಲು ಚುರುಕಾದವು. ಆದರೆ ಶ್ರವಣಾಂಗ ಅತಿ ಚುರುಕಾಗಿ ಗಾಢ ನಿದ್ರೆಯಲ್ಲಿದ್ದರೂ ಕೂಡ ಒಮ್ಮೊಮ್ಮೆ ತೀರ ಸಣ್ಣ ಧ್ವನಿ ಅದಕ್ಕೆ ಕೇಳಿಸುತ್ತಿತ್ತು— ಅದರಿಂದ ಆಪತ್ತೇ ಉಂಟಾಗಲಿ, ಸುಖ ಸನ್ನಿವೇಶವೇ ಒದಗಲಿ, ಕಾಲ್ಬೆರಳುಗಳ ನಡುವೆ ಹಿಮದ ಕಣ ಹತ್ತಿದಾಗ ಅದು ಹಲ್ಲಿನಿಂದ ಕಡಿಯುತ್ತಿತ್ತು. ನೀರಡಿಸಿದಾಗ ಅದು ಹಿಮ ನೆಲದಲ್ಲಿ ತೂತು ಕೊರೆದು ನೀರು ದೊರಕಿಸುತ್ತಿತ್ತು. ಮುಂಗಾಲೇ ಅದಕ್ಕೆ ಈಗ ಕೊರೆಯುವ ಆಯುಧ ! ರಾತ್ರಿ ಯಾವಾಗ ಬಿರುಗಾಳಿ ಬೀಸಬಹುದೆಂಬ ಲೆಕ್ಕ ಹಾಕಿ ಸೂಚಿಸುವದು ಅದರ ವಿಶಿಷ್ಟ ಲಕ್ಷಣ; ಅದರ ಘ್ರಾಣೇಂದ್ರಿಯದ ತೀಕ್ಷ್ಣತೆಗೆ ನಿದರ್ಶನ. ಉಳಿದ ಎಲ್ಲೆಡೆಗೆ ಚಳಿಯ ಕೊರೆತ ಪ್ರಬಲವಾಗಿದ್ದರೂ ಬಕ್ ಜಾಣತನದಿಂದ ಗಿಡದ ಅಡಿಯಲ್ಲೊ, ನದೀ ತೀರದಲ್ಲೊ ಬೆಚ್ಚನೆಯ ಹೋರು ಮಾಡಿಕೊಂಡಿರುತ್ತಿತ್ತು.

ಅನುಭವದ ಬಲದಿಂದ ಅದೇನೂ ಕಲಿಯಲಿಲ್ಲ. ಆದರೆ ಈ ವರೆಗೆ ಸುಷುಪ್ತಾವಸ್ಥೆಯಲ್ಲಿದ್ದ ಮೂಲಭೂತ ಭಾವನೆಗಳು ಜಾಗ್ರತವಾದವು; ಅಷ್ಟೆ. ಸಾಕು ಪ್ರಾಣಿಗಳ ಜೀವನ ಅದರ ಕಣ್ಮರೆಯಾಯ್ತು. ಹಿಂದಿನ ದಿನಗಳು ಮಸುಕು-ಮಸುಕಾಗಿ ಅದರ ಮನದೆದುರು ಮಿಂಚಿಹೋದವು. ತನ್ನನ್ನು ಕಾಡಿನ ನಾಯಿಗಳು ಹಿಂಸಿಸಿದ್ದವೆಂಬದು ವಿದಿತವಾಯ್ತು. ಹಸಿದ ತೋಳದಂತೆ ಹೋರಾಡಿ ಎದುರಾಳಿಗಳನ್ನು ಗಾಯಗೊಳಿಸುವ ಚಟ ಅದಕ್ಕಾರೂ

ಕಲಿಸಬೇಕಾಗಿರಲಿಲ್ಲ. ಹಿಂದಿನ ಗೆಳೆಯರೂ ಈಗ ಮರೆವಿನ ಸಾಮ್ರಾಜ್ಯಕ್ಕೆ ಧಾವಿಸಿದ್ದರು.

ಹೊಸ ಜೀವನದಲ್ಲಿ ಕಲಿತ ಗತ್ತುಗಾರಿಕೆಗಳೇ ಅವಕ್ಕೆ ಈಗ ಹುಟ್ಟು ಗುಣಗಳಾಗಿ ಪರಿಣಮಿಸಿದವು. ನಿರಾಯಾಸವಾಗಿ ಸಾಧಿಸಿದ ಸಂಗತಿಗಳವು. ಎಂದಿನಿಂದಲೊ ನೆಲೆ ನಿಂತಂತಾಗಿದ್ದವು ಅವು. ಪ್ರಶಾಂತವಾಗಿದ್ದರೂ ಚಳಿಯ ಒಂದೊಂದು ಇರುಳು ಅದು ತನ್ನ ಮೂಗನ್ನು ಚಿಕ್ಕೆಯೆಡಗೆ ತಿರುವಿ ನಿಂತು ದೀರ್ಘ ಸ್ವರದಲ್ಲಿ ಒದರಿದಾಗ ಅಳಿದುಹೋದ ಅವರ ಪರಿವಾರದ ನೆನಪೇ ಆಗುತ್ತಿರಬೇಕು. ಮುಂದಿನ ನೂರಾರು ಶತಮಾನಗಳ ದರ್ಶನವೂ ಆಗುತ್ತಿರಬೇಕು. ಅವರ ಸುಖ ದುಃಖಗಳೆಲ್ಲ ಸಮಗ್ರ ಕಾಲಾವಧಿಯ ಪರಿಚಿತಗಳಲ್ಲಿ ಲೀನವಾಗಿರಬೇಕು.

ಜೀವನವು ಒಂದು ಗೊಂಬೆಯಾಟ ಎಂಬ ಸುಮಧುರ ಕಲ್ಪನೆ ಅವರ ಗೀತೆಯಲ್ಲಿ ಪ್ರವಹಿಸುತ್ತಿರಬಹುದೆ ? ಈ ಎಲ್ಲ ಭ್ರಾಮಿಕ ಕಲ್ಪನೆಗಳು ಅವಕ್ಕೆ ಹೊಳೆದುವೇಕೆ ? ಉತ್ತರದಲ್ಲಿ ಪೀತ ಧಾತು ಸಿಗುವದೆಂಬ ಆಸೆಯೇ ಇವಕ್ಕೆ ಮೂಲವಲ್ಲವೆ ? ಹೊಟ್ಟೆ-ಬಟ್ಟೆಗೆ ಚಾಟಿ ಮಾಡಿಕೊಳ್ಳಲಾಗದ ಮ್ಯಾನುಯೆಲ್ಲ ಒಂದು ದಿನ ನ್ಯಾಯಾಧೀಶ ಮಿಲ್ಲರನಿಂದ ತನ್ನನ್ನು ಬಿಡುಗಡೆ ಮಾಡಿಸಿ ತಂದುದೇ ಕಾರಣವಾಗಿರಬೇಕಲ್ಲದೆ ಬೇರೆ ಏನು ?



# ೩. ಪ್ರಬಲ, ಮೂಲ ಪ್ರಕೃತಿಯ ಪ್ರಾಣಿ

ಮೂಲ ಪ್ರಕೃತಿಯು ಕಾಡುಸ್ಥಿತಿ ಬಕ್‌ನಲ್ಲಿ ಪ್ರಬಲವಾಗಿತ್ತು. ಆದರೆ ಬಂಡಿಯ ದಾರಿಯಲ್ಲಿ ಅದು ಇನ್ನೂ ಬೆಳೆಯಿತು. ಗುಟ್ಟಿನಲ್ಲಿಯೇ ಈ ಕಾರ್ಯ ಸಾಗಿತ್ತು. ಇತ್ತೀಚೆಗೆ ಸಾಧಿಸಿದ ಠಕ್ಕುತನ ಒಂದು ಬಗೆಯ ಶಕ್ತಿಯನ್ನು ಅದಕ್ಕೆ ತಂದುಕೊಟ್ಟಿತ್ತು. ಹೊಸ ಪರಿಸರಕ್ಕೆ ಅದು ಕ್ಷಿಪ್ರದಲ್ಲಿಯೆ ಹೊಂದಿಕೊಳ್ಳುವದರಲ್ಲಿತ್ತು. ಜಗಳ ತೆಗೆಯುವ ಮನಸ್ಸು ಅದಕ್ಕಿರಲಿಲ್ಲ. ಅಲ್ಲದೆ ಆದಷ್ಟು ತಪ್ಪಿಸುವ ಹವಣಿಕೆಯಲ್ಲಿಯೂ ಇದ್ದಿತು. ಈ ರೀತಿಯೇ ಅದರದೊಂದು ನಿಶ್ಚಿತ ಧೋರಣೆಯಾಗಿ ಮಾರ್ಪಟ್ಟಿತು. ಅದರಿಂದ ಏರಿ ಹೋಗುವ ಚಟವನ್ನೇ ಬಿಟ್ಟುಕೊಟ್ಟಿತ್ತು. ತನಗೂ ಸ್ಪಿಟ್ಝಿಗೂ ಮನಸ್ತಾಪವಾದಾಗ ಅದು ಅನವಶ್ಯಕ ಆತುರತೆಗೆ ಎಡೆಗೊಡುತ್ತಿರಲಿಲ್ಲ.

ಅದಕ್ಕೂ ಸ್ಪಿಟ್ಝಿಗೂ ಯಾಕೊ ಏನೊ ವೈರತ್ವ ಬೆಳೆಯುತ್ತ ಬಂದಿತ್ತು. ಅದು ಕಚ್ಚಾಟದಲ್ಲಿ ಮುಕ್ತಾಯಹೊಂದುತ್ತಿತ್ತು. ಒಮ್ಮೊಮ್ಮೆ ಸ್ಪಿಟ್ಝ ಬಕ್‌ನಿಗೆ ಬೇಕೆಂತಲೇ ಪೀಡಿಸುತ್ತಿತ್ತು. ಕಾಲುಕೆದರಿ ಕಲಹಕ್ಕೆ ಅಣಿಯಾಗುತ್ತಿತ್ತು.

ಇವೆಲ್ಲ ಘರ್ಷಣೆ ಪ್ರವಾಸಕ್ಕೆ ಮೊದಲೇ ಸಂಭವಿಸುವದಿತ್ತು; ಏಕೊ ತಪ್ಪಿತು. ಅಷ್ಟೆ. ದಿನದ ಕೊನೆಗೆ ಲೇಕ್ ಲಿ ಬಾರ್ಜದಲ್ಲಿ ಶಿಬಿರ ಬೀಡು ಬಿಟ್ಟಿತ್ತು. ಕತ್ತಲೆ, ಮೇಲೆ ಮೈಕೊರೆಯುವ ಚಳಿ. ಸುರಕ್ಷಿತ ಸ್ಥಳ ಹುಡುಕುವ ಅವಶ್ಯಕತೆ ಎನಿಸಿತು. ಹಿಂದೊಂದು ಕಲ್ಲುಗೋಡೆ ಇದ್ದಿತು. ಪೆರಾಲ್ಟ ಹಾಗೂ ಫ್ರ್ಯಾಂಕೊಯಿಸ್ ತಮ್ಮ ಹಾಸಿಗೆ ನಿಲುವಂಗಿಗಳನ್ನು ಹಿಮದ ಮೇಲೆಯೇ ಹಾಸಿಬಿಟ್ಟಿದ್ದರು. ಪ್ರವಾಸದಲ್ಲಿ ಹಗುರಿರಲೆಂದು ಡೇರೆಯನ್ನು ಹಿಂದೆಯೇ ಬಿಟ್ಟು ಹೊರಟಿದ್ದರು. ಮುಂದೆ ಉರಿ ಹಾಕಿಕೊಂಡದ್ದರಿಂದ ಅವರದೇ ಮಬ್ಬು ಬೆಳಕಿನಲ್ಲಿ ಊಟಮುಗಿಸಲು ಅನುಕೂಲವಾಗಿತ್ತು.

ಕಲ್ಲುಗೋಡೆಯ ಬದಿಗೆ ಬಕ್ ತನ್ನ ಗೂಡುಕಟ್ಟಿಕೊಂಡಿತ್ತು. ಅಲ್ಲಿ ಬಹಳ ಬೆಚ್ಚಗಿದ್ದಿತು. ಫ್ರ್ಯಾಂಕೊಯಿಸ್ ಮೀನುಗಳನ್ನು ಸುಟ್ಟು ಕೊಟ್ಟಾಗ

ಅದು ಅಲ್ಲಿ ತಿನ್ನಲೂ ಹೋಗಲಿಲ್ಲ. ಆದರೆ ಹೇಗೊ ತಿನ್ನುವವನ್ನು ಮುಗಿಸಿ ಯಾವ ಮೇಲೆ ಬಂದು ತನ್ನ ಸ್ಥಳ ನೋಡುತ್ತದೆ.– ಆಕ್ರಮಿಸಿತವಾಗಿತ್ತು ! ಗುರುಗುಟ್ಟುವ ಧ್ವನಿ ಕೇಳಿದಾಗ ಅತಿಕ್ರಮಿಸಿದ ನಾಯಿ ಸ್ಪಿಟ್ಝ್ ಎಂದು ತಿಳಿಯಿತು. ಇಷ್ಟು ಹೊತ್ತು ಹೇಗೊ ವೈರತ್ವ ಕಟ್ಟಿಕೊಂಡಿದ್ದಿಲ್ಲ ಬಕ್. ಈಗ ಮಾತ್ರ ಸಹನೆಯು ಎಲ್ಲೆ ಮೀರಿತು. ಅದರಲ್ಲಿಯ ಪಾಶವೀಶಕ್ತಿ ಜಾಗೃತವಾಯ್ತು. ಸ್ಪಿಟ್ಝನ ಮೇಲೆ ಏರಿಹೋಯಿತು. ಸಿಟ್ಟು ತಡೆಯಲಿಲ್ಲ. ಸ್ಪಿಟ್ಝ್ ತಾನೇ ಧೀರವೃತ್ತಿಯದೆಂದು ಇಷ್ಟು ದಿನ ಸೋಗು ಹಾಕಿತ್ತು. ಆದರೆ ತನ್ನಲ್ಲಿ ನೀರಿದೆ ಎಂದು ತೋರಿಸಲು ಈಗ ಬಕ್ ಹೆಣಗಿತು.

ಫ್ರ್ಯಾಂಕೊಯಿಸ್ ಈ ಜಗಳದ ರೀತಿ ನೋಡಿ ಅಚ್ಚರಿಗೊಂಡ. 'ಹಾಹು' ಎಂದು ಬಿಡಿಸಲು ಯತ್ನಿಸಿದ.

ಸ್ಪಿಟ್ಝ್ ಆದರೂ ಜಗಳಕ್ಕೆ ಅಣಿ ಇತ್ತು. ಅದೂ ಏರಿಹೋಗಿ ಗಾಯಗೊಳಿಸಲು ತಿರುಗುತ್ತಿತ್ತು. ಬಕ್‌ಗೂ ಅದೇ ಆತುರತೆ ! ಅದೂ ಸುತ್ತು ಹಾಕಿತು. ಒಡೆತನ ಯಾರದೆಂಬ ಮಾತಿನ ನಿರ್ಣಯವಾಗಲಿ ಎಂಬ ಹಟ ಎರಡೂ ಪ್ರಾಣಿಗಳಲ್ಲಿ ಕಾಣತೊಡಗಿತು.

ಪೆರಾಲ್ಟ ಬಂದು ಗದಾಪ್ರಯೋಗ ಮಾಡಿದಾಗ ಚೀರಾಟ ಬೊಗಳಿಕೆ ನಡೆದವು. ಇಲ್ಲಿಂದಲೆ ದಂಗೆ ಪ್ರಾರಂಭ. ಶಿಬಿರದಲ್ಲಿ ಅಪೂರ್ವ ಗಲಭೆಯುಂಟಾಯಿತು. ಭಾರತದ ಕೆಲವು ಹಳ್ಳಿಗಳಿಂದ ಬಂದ ಹತ್ತಿಪ್ಪತ್ತು ಹಸ್ಕಿ ನಾಯಿಗಳು ಹೇಗೊ ಶಿಬಿರದ ವಾಸನೆ ಹಿಡಿದು ಗುಂಪುಗೂಡಿದವು. ಇವೆರಡು ನಾಯಿಗಳ ಜಗಳದಲ್ಲಿ ಅವೂ ಕೂಡಿದವು. ಒಡೆಯರಿಬ್ಬರು ಗದಾಧಾರಿಗಳಾಗಿ ಬಂದರು. ಆಹಾರವನ್ನೇಕೆ ಅವು ಬಿಟ್ಟಾವು ? ಕೆಲವಕ್ಕೆ ಮೈಮುರಿ ಹೊಡೆತ ಬಿದ್ದು ಎಲವು ಮುರಿದವು. ಮತ್ತೂ ಅನೇಕ ನಾಯಿಗಳು ಬಂದವು. ಗದಾಪ್ರಹಾರ ಸಾಗಿಯೇ ಇದ್ದಿತು. ಆಹಾರದ ಆಮಿಷವೇ ಅಂತಹದು ! ಪೂರ್ಣ ಹೊಟ್ಟೆತುಂಬುವವರೆಗೆ ಅವು ಪ್ರಹಾರ ಲೆಕ್ಕಿಸಲಿಲ್ಲ.

ಎದುರಾಳಿಗಳನ್ನು ಚದರಿಸಲು ಅಷ್ಟರಲ್ಲಿ ಶಿಬಿರದ ನಾಯಿಗಳನ್ನು ಬಿಡಲಾಯಿತು. ಇಂತಹ ನಾಯಿಗಳನ್ನು ಬಕ್ ಜನ್ಮದಲ್ಲಿಯೂ ನೋಡಿರಲಿಲ್ಲ. ಎಲುವಿನ ಹಂದರ ಅವು. ಹೊಳೆಯುವ ಕಣ್ಣು, ಚೂಪಾದ ಹಲ್ಲು, ಜೋತಾಡುವ ತೊಗಲು. ಆದರೆ ಹಸಿವೆಯ ಭೂತ ಹಿಡಿದ ಮೂಲಕ ಅವು

ಭಯಾನಕವಾಗಿದ್ದವು. ಅವನ್ನಾರೂ ತಡೆಯರು. ಮೊದಲು ಸಲ ಇವೆಲ್ಲ ಒಂದೆ ಕಲ್ಲುಗೋಡೆಗೆ ಹೋಗಿ ಬಿದ್ದವು. ಈ ಗದ್ದಲದಲ್ಲಿ ಬಕ್ ನುಗ್ಗಾಯಿತು. ಬಿಲ್ಲಿ ಗೋಳಿಡುತ್ತಿತ್ತು. ಡೇವ್ಸ್, ಸೊಲೆಕ್ಸ್, ರಕ್ತ ಹೊರಸೂಸಿದರೂ ಶೌರ್ಯದಿಂದಲೇ ಕಾದಾಡುತ್ತಿದ್ದವು. ಜೊ ರಾಕ್ಷಸನಂತೆ ಕಾಣುತ್ತಿತ್ತು. ನಾಯಿಗಳನ್ನು ಕಡಿಯಹೋಗಿ ಗಾಯಗೊಂಡು ಬಿದ್ದಿತು. ಪೈಕ್ ಸಹ ಕಡಿಯಲು ಹೋಗಿ ಗೋಣು ಮುರಿದುಕೊಂಡು ಬಿದ್ದಿತು. ಬಕ್ ಗಂಟಲು ಕಡಿಸಿಕೊಂಡು ಉರುಳಿತು. ಅವರೂ ಬಿಸಿ ನೆತ್ತರದ ರುಚಿ ಹತ್ತಿ ಮತ್ತೆ ಏರಿ ಹೋಯಿತು. ವಿಶ್ವಾಸಘಾತುಕತನದಿಂದ ಸ್ಪಿಟ್ಜ್ ಬಂದು ಬಕ್‌ನನ್ನು ಗಾಯಗೊಳಿಸಿತು.

ಪೆರಾಲ್ಟ ಮತ್ತು ಫ್ರಾಂಕೊಯಿಸರು ಶಿಬಿರದ ಸ್ವಚ್ಛತೆ ನೋಡಿಕೊಂಡು ತಮ್ಮ ಜಾರುಬಂಡಿಯ ನಾಯಿಗಳನ್ನು ಉಳಿಸಿಕೊಳ್ಳಲು ಹೆಣಗಿದರು. ಮತ್ತೆ ಮೊದಲಿನಂತೆ ಜಗಳಾಟಕ್ಕೆ ಪ್ರಾರಂಭ. ಬಕ್ ಸಹ ಅಣಿಯಾಯಿತು. ತಮ್ಮ ಉಳಿದ ಆಹಾರ ಉಳಿಸಿಕೊಳ್ಳಲು ಅವರು ಓಡಿದರು. ಅಷ್ಟರಲ್ಲಿ ಹಸ್ಕಿ ನಾಯಿಗಳು ಶಿಬಿರದ ನಾಯಿಗಳ ಮೇಲೆ ಏರಿಹೋದವು. ಬಿಲ್ಲಿ ಹೆದರಿ ಕಾಡು ಪ್ರಾಣಿಗಳೊಳಗಿಂದ ಪಾರಾಗಿ ಹಿಮನೆಲದ ಮೇಲೆ ಓಡಿಹೋಯಿತು. ಪೈಕ್ ಮತ್ತು ಡಬ್ ಉಳಿದವೂ ಅದರ ಹಿಂದೆಯೇ ಓಡಿದವು. ಬಕ್ ಇವರನ್ನೆಲ್ಲ ಎದುರಿಸಲು ಹವಣಿಸುವಾಗ ಸ್ಪಿಟ್ಜ್ ಅದರ ಮೇಲೆ ಏರಿಹೋಗಿ ಉರುಳಿಸಲು ಯತ್ನಿಸಿತು. ಹಸ್ಕಿ ನಾಯಿಗಳ ಸಮೂಹದಲ್ಲಿ ಸಿಕ್ಕಾಗ ರಕ್ಷಣೆಯ ಬೇರೆ ಮಾರ್ಗವೇ ಉಳಿಯಲಿಲ್ಲ. ಸ್ಪಿಟ್ಜನ ಆಹ್ವಾನವನ್ನು ಸ್ವೀಕರಿಸಿ ಮುಂದೆ ಸರೋವರದ ಮೇಲಿನ ಕಚ್ಚಾಟಕ್ಕೆ ಹೋಯಿತು.

ಮುಂದೆ ದಳದ ಒಂಬತ್ತು ನಾಯಿಗಳು ಅಡವಿಯಲ್ಲಿ ಆಶ್ರಯ ಪಡೆದವು. ಹಸಿದ ನಾಯಿಗಳೂ ಅವನ್ನು ಬೆನ್ನಟ್ಟಿದ್ದರೂ ಅವುಗಳ ಸ್ಥಿತಿ ಚಿಂತಾಜನಕವಾಗಿತ್ತು. ಐದಾರು ಕಡೆಗೆ ಗಾಯಗಳಾಗದ ಒಂದು ನಾಯಿ ಸಹ ಅಲ್ಲಿರಲಿಲ್ಲ! ಕೆಲವಕ್ಕಂತೂ ಕಣ್ಣಾರೆ ನೋಡಲಾಗದಷ್ಟು ಗಾಯ! ಡಬ್ ನಾಯಿಯ ಹಿಂಗಾಲಿಗೆ ಬಹಳ ಗಾಯವಾಗಿತ್ತು. ದಳದ ನಾಯಿ, ಡಾಲಿಯ ಗಂಟಲು ಹರಿದುಹೋಗಿತ್ತು. ಜೋನ ಕಣ್ಣೇ ಕುರುಡಾಗಿತ್ತು. ಸುಸ್ವಭಾವಿ ಬಿಲ್ಲಿ ಇಡೀ ರಾತ್ರಿ ನರಳಿತು. ನಸುಕು ಹರಿದಾಗ ಕಾಲೆಳೆಯುತ್ತ ನಾಯಿಗಳೆಲ್ಲ

ಶಿಬಿರಕ್ಕೆ ಬಂದವು. ಎದುರಾಳಿ ನಾಯಿಗಳು ಕಾಣಲಿಲ್ಲ. ಇಬ್ಬರೂ ಒಡೆಯರು ಮಾತ್ರ ದುಮು ದುಮು ಉರಿಯುತ್ತಿದ್ದರು. ತಮ್ಮ ಆಹಾರದ ಅರ್ಧ ಭಾಗ ಹೋಗಿಬಿಟ್ಟಿದ್ದರಿಂದ ಅವರ ಕಳವಳ ಹೆಚ್ಚಿತ್ತು. ಹಸ್ಕಿ ನಾಯಿಗಳ ಹಾವಳಿ ಅಷ್ಟಿಷ್ಟಿರಲಿಲ್ಲ. ಕ್ಯಾನ್ವಾಸ್ ಹೊದಿಕೆಯನ್ನೂ ತೊಗಲಿನ ಪಟ್ಟಿಗಳನ್ನೂ ತಿಂದಿದ್ದವು. ತಿನ್ನುವ ಯಾವ ವಸ್ತುಗಳನ್ನು ಅವು ಬಿಟ್ಟಂತೆ ಕಾಣಲಿಲ್ಲ. ಫ್ರಾಂಕೊಯಿಸನ ಚಬಕದ ತೊಗಲನ್ನು ಸಹ ತಿಂದಿದ್ದವು. ಗಾಯಗೊಂಡ ತನ್ನ ನಾಯಿಗಳನ್ನು ನೋಡಿ, ಹಾಸಿಯನ್ನು ಮನದಂದು ಯೋಚನಾಪರವಶವಾದನವ.

' ಇವಕ್ಕೆಲ್ಲ ಹುಚ್ಚು ಹಿಡಿದರೇನುಗತಿ ? ' ಎಂದು ಫ್ರಾಂಕೊಯಿಸ ಪೆರಾಲ್ಟನೊಡನೆ ವಿಚಾರ ವಿನಿಮಯ ಮಾಡತೊಡಗಿದ.

ವಾರ್ತಾವಾಹಕ ಸಂಶಯದಿಂದ ತಲೆ ಕೊಡಹಿದ. ಡಾಸನ್ನಿನ ಪ್ರವಾಸ ಇನ್ನು ನಾಲ್ಕು ನೂರು ಮೈಲು ಇರುವಾಗ ನಾಯಿಗಳಿಗೆ ಈ ವಿಪತ್ತು ಬಂದರೇನು ಮಾಡುವದೆಂದು ಚಿಂತಾಕುಲನಾದ. ನೂರಾರು ರೀತಿಯಾಗಿ ಬಂದ್ದು ಮೇಲೆ ಜೀನಿಗೆ ಒಂದು ಸ್ವರೂಪ ಬಂದಿತು. ಹೇಗೊ ಕುಂಟುತ್ತ ಕೂರುತ್ತ ದಳ ಸಾಗಿತು. ದಾರಿ ಪ್ರಯಾಸದ್ದು.

ಮೂವತ್ತು ಮೈಲಿನ ನದಿಯ ವಿಸ್ತಾರ ಎದುರಿಗಿತ್ತು. ನೀರ ಮೇಲೆ ಮಂಜು. ಮಡುವುಗಳಲ್ಲಿ ಮಾತ್ರ ಹಿಮವಿರುತ್ತಿತ್ತು. ಆರು ದಿನ ಅತಿ ಪರಿಶ್ರಮಪಟ್ಟಾಗ ನದಿ ಪ್ರವಾಸ ಮುಗಿಯಿತು. ನಾಯಿಗೂ ಮನುಷ್ಯನಿಗೂ ಸ್ವಲ್ಪ ದಾರಿ ಕ್ರಮಿಸುವದೂ ದುಸ್ತರವಾಗಿತ್ತು. ಜೀವನಕ್ಕೆ ಭಯವೇ ಉಂಟಾಗಿತ್ತು. ಹತ್ತು ಹನ್ನೆರಡು ಸಲ ಪೆರಾಲ್ಟ ಹಿಮ ಸೇತುವೆಗಳನ್ನು ಕೈಯ್ಯಲ್ಲಿಯ ಉದ್ದ ಕೋಲಿನಿಂದ ಮುರಿಯುತ್ತ ನಡೆದಿದ್ದ. ಆದರೆ ಗಾಳಿಯಲ್ಲಿ ಚಳಿ ಹೆಚ್ಚಿ, ಶೂನ್ಯದ ಕೆಳಗೆ ಐವತ್ತು ಅಂಶ ಉಷ್ಣತಾಮಾಪಕ ಯಂತ್ರ ತೋರಿಸಿತು. ಸೇತುವೆಗಳನ್ನು ಹೀಗೆ ಕಡಿಯುತ್ತ ಸಾಗಿದಾಗ ಎಷ್ಟೋ ಸಲ ಬೆಂಕಿ ಮಾಡಿ ಅರಿವೆ ಒಣಗಿಸಿಕೊಳ್ಳಬೇಕಾಗುತ್ತಿತ್ತು—ಪೆರಾಲ್ಟನಿಗೆ.

ಯಾವುದನ್ನೂ ಅವನು ಲೆಕ್ಕಿಸಲಿಲ್ಲ. ಸರಕಾರದ ಸಂದೇಶವಾಹಕನಲ್ಲವೆ ಅವ ? ಮುಂಜಾವಿನಿಂದ ಸಂಜೆಯ ವರೆಗೂ ಆ ಹಿಮ ಪ್ರದೇಶದಲ್ಲಿ ಎಂತಹ ಸಂಕಟಕ್ಕೂ ಅವ ಎದೆಗುಂದಲಿಲ್ಲ. ಮಾರ್ಗದಲ್ಲಿ ಒಮ್ಮೆ ಜೇನ್ದ

ಮತ್ತು ಬಕ್ ಅರ್ಧಮರ್ಧ ಹಿಮದಲ್ಲಿ ಮುಚ್ಚಿಹೋಗಿದ್ದವು. ಬಂಡಿ ಎಳೆಯು ವವೇ ಕಠಿಣವಾಯ್ತು. ರೂಢಿಯಂತೆ ಕಟ್ಟಿಗೆ ತಂದು ಉರಿ ಮಾಡಲಾಯಿತು. ಬೆಂಕಿಯ ಕಿಡಿ ತಾಗುವಷ್ಟು ಸಮೀಪದಲ್ಲಿಯೇ ಒಡೆಯರಿಬ್ಬರು ಬೆವರುತ್ತ ನಿಂತರು.

ಮತ್ತೊಂದು ಸಲ ಸ್ಪಿಟ್ಜ್ ಇಡೀ ದಳವನ್ನು ಎಳೆದುಕೊಂಡು ಹೋಗಲು ತಾನೇ ಮುಂದಾಗಿತ್ತು. ಹಿಂದಿನ ಭಾರ ವಹಿಸಲು ಬಕ್. ಎಲ್ಲೆಡೆಗೂ ಹಿಮ ಕುಸಿಯುತ್ತಿತ್ತು. ಬಕ್‌ನ ಹಿಂದೆ ಡೇವ್ಹ ಇದ್ದಿತು. ಬಂಡಿಯ ಹಿಂದೆ ಇದ್ದ ಫ್ರ್ಯಾಂಕೊಯಿಸ್ ತನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ ಜಗ್ಗುತ್ತಿದ್ದ.

ಹಿಂದೆ ಮುಂದೆ ಎಲ್ಲೆಡೆ ಹಿಮ ಸೀಳತೊಡಗಿತು. ಬಂಡೆಗಲ್ಲಿನ ತುದಿಗೆ ನಾಯಿಗಳನ್ನು ನಿಲ್ಲಿಸಿ ಹಗ್ಗ ಹಚ್ಚಿ ಬಂಡಿ ಎಳೆಯಿಸುವದೇ ಅವರಿಗೆ ಅವಶ್ಯವೆನಿ ಸಿತು. ಇಷ್ಟೆಲ್ಲ ಗುದುಮುರಿಗೆ ಹಾಕಿದರೂ ಇಡೀ ದಿನ ಮುಕ್ಕಾಲು ಮೈಲು ದಾರಿ ಕ್ರಮಿಸುವದಾಗಿರಲಿಲ್ಲ.

ಹೂಟಾಲಿಂಕ್ವಾದ ವರೆಗೆ ಬರುವಷ್ಟರಲ್ಲಿ ಬಕ್‌ನ ಆಟ ಮುಗಿದಿತ್ತು. ಉಳಿದ ನಾಯಿಗಳ ಸ್ಥಿತಿಯೂ ಸುಮಾರು ಹಾಗೆಯೇ ಇದ್ದಿತು. ಆದರೆ ಪೆರಾಲ್ಟ ಹಿಂದಾದ ಹಾನಿ ತುಂಬಿಸಿಕೊಳ್ಳುವದಕ್ಕಾಗಿ ಮುಂಜಾವು ತೀವ್ರ ಪಯಣ ಹೊರಡಿಸಿ ಸಂಜೆಗೆ ತಡಮಾಡಿ ವಿಶ್ರಾಂತಿ ಕೊಡುತ್ತಿದ್ದ ನಾಯಿಗಳಿಗೆ. ಮೊದಲದಿನ ಮೂವತ್ತೈದು ಮೈಲು ಪ್ರವಾಸವಾಯಿತು. ಮರುದಿನವೂ ಅಷ್ಟೇ. ಫಾಯಿವ್ಹ್ ಫಿಂಗರಿನ ವರೆಗೆ ಈಗ ತಲುಪಿದ್ದಾಯಿತು.

ಹಸ್ಕಿ ನಾಯಿಗಳಷ್ಟು ಬಕ್‌ನ ಪಾದ ಬಿರುಸಿರಲಿಲ್ಲ. ಇತ್ತೀಚೆಗೆ ಅನೇಕ ಕುತ್ತಿನಿಂದ ಪಾರಾಗಿ ಮೆತ್ತಗಾಗಿದ್ದವು. ಇಡೀ ದಿನ ಅದು ಕುಂಟುತ್ತಲೆ ಇರುತ್ತಿತ್ತು. ರಾತ್ರಿ ಸತ್ತಂತೆ ಬೀಳುತ್ತಿತ್ತು. ಫ್ರ್ಯಾಂಕೊಯಿಸ್ ಮೀನಿನ ಲೇಶನ್ನು ಹಂಚಲು ನಿಂತಾಗ ಅದು ಸರಿದಾಡುತ್ತಿರಲಿಲ್ಲ. ಅವನೇ ತಂದು ಕೊಡು ತ್ತಿದ್ದ. ನಾಯಿಯ ಒಡೆಯ ದಿನಾಲು ಇರುಳು ಅದರ ಕಾಲು ತಿಕ್ಕುತ್ತಿದ್ದ. ಇದರಿಂದ ಗುಣಮುಖವಾಯಿತು. ಒಂದು ದಿನ ಪೆರಾಲ್ಟ ಸಹ ಸಣ್ಣ ಮೋಜೆ ಮಾಡಿದ್ದ. ಒಮ್ಮೆಯಂತೂ ನಾಲ್ಕೂ ಕಾಲು ಮೇಲಕ್ಕೆತ್ತಿ ಅಡ್ಡಬಿದ್ದು ಬಿಟ್ಟಿ ತದು. ಕ್ರಮೇಣ ಈ ಪ್ರವಾಸಕ್ಕೆ ಕಾಲು ಬಿರುಸಾದವು; ರೂಢಿಗೊಂಡವು.

ಒಂದು ಮುಂಜಾವು ಪೆಟ್ಟಿಯಲ್ಲಿ ಜೀನು ಹಾಕುತ್ತಿರುವಾಗ ಡಾಲಿಗೆ ಅಕಸ್ಮಾತ್ ಹುಚ್ಚು ಹಿಡಿಯಿತು. ಎದೆ ಬಿರಿಯುವಂತೆ, ತೋಳನಂತೆ ಅದು ಒಂದೇ ಸವನೆ ಚೀತ್ಕಾರ ಪ್ರಾರಂಭಿಸಿತು. ಉಳಿದ ನಾಯಿಗಳು ಹೆದರಿದವು. ಬಕ್ ನೆಡೆಗೆ ಟಣ್ಣೆಂದು ಹಾರಿತು. ಹುಚ್ಚು ಹಿಡಿಯುವದೆಂದರೇನು ಎಂಬದು ಅದಕ್ಕೆ ಈ ವರೆಗೂ ಗೊತ್ತಿರಲಿಲ್ಲ. ಈ ಪರಿಸ್ಥಿತಿ ಭಯಾನಕವೆಂಬ ಅರಿವು ಮಾತ್ರ ಉಂಟಾಯಿತು. ಬಕ್ ಓಡಿಹೋಯಿತು—ಹೌಹಾರಿ ! ಮುಂದೆ ಬಕ್, ಹಿಂದೆ ಡಾಲಿ. ಹೀಗೆ ಪಂದ್ಯ ಪ್ರಾರಂಭವಾಯಿತು. ಏನಾದರೂ ನಿಲ್ಲ ಲಿಲ್ಲ. ನಡುಗಡ್ಡೆಯ ಕಾಡು, ಏರು–ಪೇರು, ಕಾಲುವೆ, ನದಿ—ಎಲ್ಲ ತಿರುಗಿ ದ್ದಾಯಿತು. ಹಿಂದಕ್ಕೆ ನೋಡದಿದ್ದರೂ ಗುರುಗುಟ್ಟುವ ಧ್ವನಿ ಕೇಳುತ್ತಲೇ ಇದ್ದಿತು. ಫ್ರಾನ್ಸ್ವಾ ತನ್ನನ್ನು ಉಳಿಸಿಯಾನೆಂದು ಬಕ್ ಆಸೆ ಹಿಡಿದು ನುಗ್ಗುತ್ತಿತ್ತು. ಅಷ್ಟರಲ್ಲಿ ನಾಯಿಯ ಒಡೆಯ ತನ್ನ ಕೈಕೊಡಲಿ ಯಿಂದ ಹುಚ್ಚು ಹಿಡಿದ ಡಾಲಿಯ ತಲೆ ಕತ್ತರಿಸಿ ಚೆಲ್ಲಿದ.

ಬಕ್ ತಲೆ ತಿರುಗಿ ಬೀಳುವಂತಾಗಿತ್ತು. ದೀರ್ಘ ಶ್ವಾಸ ನಡೆದಿತ್ತು. ಬಿಕ್ಕುತ್ತಿತ್ತು. ಇದೆ ಸುವರ್ಣ ಸಂಧಿಯೆಂದು ಸ್ಪಿಟ್ಝ ಬಕ್‌ನ ಮೇಲೆ ಹಾರಿತು. ಎಲುವಿಗೆ ಹತ್ತುವಂತೆ ಕಚ್ಚಿ ಅದಕ್ಕೆ ಗಾಯಗೊಳಿಸಿತು ! ತೊಗಲು ಸುಲಿ ದಂತಾಗಿ ಮಾಂಸ ಹೊರಬಂದಿತು. ಫ್ರಾನ್ಸ್ವಾನ ಚಬಕದಿಂದ ಪರಿ ಸ್ಥಿತಿ ಅಳವಿಗೆ ಬಂದಿತು. ಈ ಹೊಡೆತ ನೋಡುವದೇ ಭಾಗ್ಯವೆಂದೆನಿಸಿ ಬಕ್ ಸಮಾಧಾನ ತಳೆಯಿತು. ಹಿಂದೆಂದೂ ಇಂತಹ ಹೊಡೆತ ಸ್ಪಿಟ್ಝನಿಗೆ ಬಿದ್ದಿರ ಲಿಲ್ಲ. ಯಾರಿಗೂ ಬಿದ್ದಿರಲಿಲ್ಲ !

‘ ಸ್ಪಿಟ್ಝ ದೆವ್ವನಂತಹ ನಾಯಿ. ಯಾವಾಗ ಬಕ್‌ನನ್ನು ಕೊಂದೀತೊ ಹೇಳಲಿಕ್ಕಾಗದು ’ ಎಂದು ಪೆರಾಲ್ಟ ನುಡಿದ.

ನಿಶ್ಚಿತವಾಗಿ ಒಂದಿಲ್ಲೊಂದು ದಿನ ಎರಡೂ ನಾಯಿಗಳಿಗೆ ಹುಚ್ಚು ಹಿಡಿ ದೀತು ! ಎಂದು ಫ್ರಾನ್ಸ್ವಾ ಮರುನುಡಿದ.

ಅಂದಿನಿಂದ ಎರಡೂ ನಾಯಿಗಳಲ್ಲಿ ವೈರಭಾವ ಬೆಳೆಯುತ್ತ ನಡೆದಿತು. ಸ್ಪಿಟ್ಝ ತಾನು ಇಡಿ ದಳಕ್ಕೆ ಅಧಿಪತಿ ಎಂದು ಭಾವಿಸಿತ್ತು. ದಕ್ಷಿಣ ದೇಶದ ನಾಯಿಯಿಂದ ಮಾತ್ರ ಇದಕ್ಕೆ ಕಾಲ್ತೊಡಕಾಗಿತ್ತು. ಎಷ್ಟೊ ದಕ್ಷಿಣದ ನಾಯಿ ಗಳನ್ನದು ನೋಡಿದ್ದರೂ ಬಕ್‌ನ ಯೋಗ್ಯತೆ ಅವುಗಳಿಗಿರಲಿಲ್ಲ. ಮಂಜು,

ಹಸಿವೆ, ದುಡಿತ—ಯಾವುದಕ್ಕೂ ಈಡಾಗಿ ಬದುಕುತ್ತಿದ್ದಿಲ್ಲ. ಬಕ್ ಒಂದೇ ಅಪವಾದವಾಗಿತ್ತು. ಈ ಠಕ್ಕುತನ, ಕಾಡು ಸ್ಥಿತಿಗಳ ಬಲದಿಂದಾಗಿ ಹಸ್ಕಿ ನಾಯಿಗಳ ನಡುವೆ ಸಿಕ್ಕು ಅದೊಂದೆ ಬದುಕಿತು. ಉತ್ಕರ್ಷೆಯನ್ನೂ ಸಾಧಿಸಿಕೊಂಡಿತು. ಹಿರಿತನದ ಲಕ್ಷಣ ಅದರಲ್ಲಿದ್ದವು. ಆದರೆ ಕೆಂಪು ಸ್ವೆಟರಿನ ಮನುಷ್ಯನ ದೊಣ್ಣೆಯ ಆಡಳಿತಕ್ಕೊಳಗಾಗಿ ಎಲ್ಲ ಜಾಣತನ, ಮಹತ್ವಾಕಾಂಕ್ಷೆ, ಕಳೆದುಹೋದಂತಾಗಿದ್ದವು. ಹಾಗೆ ನೋಡಿದರೆ ಅದರಲ್ಲಿ ಠಕ್ಕುತನ, ತಾಳ್ಮೆ ಎಷ್ಟೂ ಕಡಿಮೆ ಇರಲಿಲ್ಲ.

ಒಡೆತನದ ಪ್ರಶ್ನೆ ಬಾರದೆ ಹೋಗುವಂತಿರಲಿಲ್ಲ. ಅದಕ್ಕಾಗಿ ಕಲಹ ನಡೆಯುವುದೇ ಇದ್ದಿತು. ಬಕ್‌ಗೂ ಅದು ಬೇಕಾಗಿತ್ತು. ಆಧಿಪತ್ಯದ ಅಭಿಮಾನ ಅದರಲ್ಲಿ ಉಕ್ಕುತ್ತಿತ್ತು. ಜೀನಿಗೆ ಹೆಗಲು ಕೊಟ್ಟಾಗ ಸಾಹಸದಿಂದ ಎಳೆದು ತಂದುಕೊಳ್ಳಬೇಕು. ಅದಿಲ್ಲದಿದ್ದರೆ ಮರಣ ಸನ್ನಿಹಿತವಾದರೂ ಚಿಂತೆ ಇಲ್ಲ ಎಂಬ ಭಾವನೆ ಅದರದು. ಡೇವ್, ಸೊಲೆಕ್ಸ ನಾಯಿಗಳಿಗೂ ಇಂತಹದೇ ಆಕಾಂಕ್ಷೆ. ಆದರೆ ಇಡಿ ದಿನ ಕೆಲಸದಲ್ಲಿದ್ದಾಗಿನ ಹಿರಿಯಾಸೆ ಇರುಳು ಶಿಬಿರವು ಬೀಡುಬಿಟ್ಟಾಗ ಹೇಳಹೆಸರಿಲ್ಲದಾಗುತ್ತಿತ್ತು. ನಿರುತ್ಸಾಹ, ಅಸಮಾಧಾನ ತಲೆ ಎತ್ತುತ್ತಿದ್ದವು. ಈ ಮಹತ್ವಾಕಾಂಕ್ಷೆಗೊಳಗಾಗಿಯೇ ಸ್ಪಿಟ್ಜು ಎಲ್ಲ ನಾಯಿಗಳನ್ನು ತಿದ್ದುವದು, ಅಧಿಕಾರ ಪ್ರಸ್ಥಾಪಿಸುವದು ನಡೆಸಿತ್ತು. ಒಳಗಿಂದೊಳಗೆ ಬಕ್‌ನಿಗೆ ಇದಕ್ಕಾಗಿಯೇ ಹೆದರುತ್ತಿತ್ತು. ತಾನೂ ಮುಂದೆ ಬರಬೇಕೆಂದು ಬಕ್‌ನ ಬಯಕೆ !

ಬೇರೆಯುವರ ಹಿರಿತನ ಅದಕ್ಕೆ ಸರಿಬರುತ್ತಿರಲಿಲ್ಲ. ವೈರ ಉಳಿಸಿಕೊಳ್ಳುವ ನಾಯಿಗಳ ನಡುವೆ ಅದು ಬೇಕೆಂತಲೇ ಬರುತ್ತಿತ್ತು. ಒಂದು ಇರುಳು ಹಿಮ ಬೀಳುತ್ತಿತ್ತು. ಮರುದಿನ ಮುಂಜಾವು ಪೈಕ್ ಕಾಣಲಿಲ್ಲ. ತನ್ನ ಹೋರಿನಲ್ಲಿ ಅದು ಸುಖವಾಗಿ ಮಲಗಿತ್ತು. ಫ್ರ್ಯಾಂಕೊಯಿಸ್ ಹುಡುಕಿ ಹುಡುಕಿ ಬೇಸತ್ತ. ಸ್ಪಿಟ್ಜನಿಗೆ ಸಿಟ್ಟು ತಡೆಯಲಿಲ್ಲ. ಎಲ್ಲೆಡೆ ಹುಡುಕುವ ನೆವದಿಂದ ಹೋರಿನಿಂದ ಹೋರಿಗೆ ಹೋಗಹತ್ತಿತು. ಹಿಮವನ್ನು ಅಗೆಯತೊಡಗಿತು. ಇದನ್ನೆಲ್ಲ ಗುರುತಿಸಿ ಪೈಕ್ ಒಳಗೇ ಹೆದರಿಹೋಯಿತು.

ಕೊನೆಗೆ ಕಂಡು ಹಿಡಿದು ಸ್ಪಿಟ್ಜು ಅದರೆಡೆಗೆ ಹಾರಿತು. ಅಷ್ಟೇ ರಭಸದಿಂದ ನಡುವೆ ಬಕ್ ಬಂದಿತು. ಈ ಅನಿರೀಕ್ಷಿತ ಜಗಳದಲ್ಲಿ ಸ್ಪಿಟ್ಜು ನೆಗೆದು

ಬಿದ್ದಿತು. ಮುಚ್ಚುಮರೆಯಿಲ್ಲದ ಈ ದಂಗೆಯಲ್ಲಿ ಪೈಕ್ ಉತ್ಸಾಹಿತವಾಗಿ, ಕಾಲ್ಪಿಗೆದ ಎದುರಾಳಿಯ ಮೇಲೆ ನೆಗೆದುಬಿದ್ದಿತು. ಪ್ರಾಮಾಣಿಕತೆ ಏನೆಂಬ ದನ್ನು ಅಭ್ಯಸಿಸದಿದ್ದ ಬಕ್ ಈಗ ಸ್ಪಿಟ್ಜ್‌ನ ಮೇಲೆ ಜಿಗಿಯಿತು. ಕಾಯಿದೆ ಕಾನೂನಿನ ವಿಷಯದಲ್ಲಿ ನಿಃಸ್ಪೃಹಿಯಾದ ಫ್ರಾಂಕೊಯಿಸ್ ಬಕ್‌ನನ್ನು ಶಕ್ತಿ ಮೀರಿ ದಂಡಿಸಿದ. ಇಷ್ಟಾದರೂ ಹಿಂತೆಗೆಯದ್ದರಿಂದ ಬಕ್‌ನಿಗೆ ಮತ್ತೆ ಮತ್ತೆ ಚಬಕದ ಪ್ರಯೋಗವಾಯಿತು. ಇದೇ ಕಾಲಕ್ಕೆ ಸ್ಪಿಟ್ಜ್ ಪೈಕನ ಮೇಲೆ ಸೇಡು ತೀರಿಸಿಕೊಂಡಿತು.

ಡಾಸನ್ ಸಮೀಪಿಸುತ್ತ ಬಂದಂತೆಲ್ಲ, ಅಪರಾಧಿಗಳನ್ನು ಸ್ಪಿಟ್ಜ್ ಶಿಕ್ಷಿಸು ವಾಗಲೆಲ್ಲ ಬಕ್ ನಡುವೆ ಬಂದೇ ಬರುತ್ತಿತ್ತು. ಆದರೆ ಫ್ರಾಂಕೊಯಿಸನ ಕಣ್ಣು ತಪ್ಪಿಸಿ ಕಳ್ಳತನದಿಂದ ಈ ಕಾರ್ಯದಲ್ಲಿ ಅದು ಪ್ರವೃತ್ತವಾಗುತ್ತಿತ್ತು. ಬಕ್ ಈ ಪ್ರಕಾರ ಬಂಡೆಬ್ಬಿಸಿದುದರ ಪರಿಣಾಮವಾಗಿ ದಳದಲ್ಲೆಲ್ಲ ಸಹಜವಾಗಿ ಅಸ್ತವ್ಯಸ್ತತೆ ತಲೆದೋರತೊಡಗಿತು. ಡೇವ್ಹ ಸೋಲೆಕ್ಸ ಎಂದಿನಂತೆಯೇ ಇದ್ದವು. ಆದರೆ ಉಳಿದ ನಾಯಿಗಳು ಹೊಣೆಗೇಡಿಯಾಗತೊಡಗಿದವು. ಒಂದೇ ಸವನೆ ಅರಾಜಕತೆ ಅಡಿ ಇಡತೊಡಗಿತು. ತೊಂದರೆ ಕ್ಷಣ ಕ್ಷಣಕ್ಕೆ ಬರ ತೊಡಗಿದವು. ಎಲ್ಲಕ್ಕೂ ಕಾರಣೀಭೂತ ಬಕ್! ನಾಯಿಯ ಮಾರ್ಗ ದರ್ಶಕ, ಫ್ರಾಂಕೊಯಿಸ್ ಇಬ್ಬರಿಗೂ ಯಾವಾಗಲೂ ಬಕ್ ಸ್ಪಿಟ್ಜ್‌ರ ಜಗಳ ತಲೆತಿನ್ನುತ್ತಿತ್ತು. ಏನೊ ಅಪಘಾತವಾಗುವದೆಂದು ನಿರೀಕ್ಷಿಸುತ್ತಿದ್ದರು. ಇರುಳು ಸಹ ಅದಕ್ಕಾಗಿ ಹೊರಗೆ ಬರುತ್ತಿದ್ದರು.

ಆದರೆ ಸುದೈವದಿಂದ ಡಾಸನ್ ಮುಟ್ಟುವ ಮಧ್ಯಾಹ್ನದ ವರೆಗೂ ಅಂತಹ ವಿಪತ್ತು ಒದಗಲಿಲ್ಲ. ಇಲ್ಲಿ ಅಸಂಖ್ಯ ಜನರಿದ್ದರು. ನಾಯಿಗಳಿಗೂ ಲೆಕ್ಕವಿಲ್ಲ. ಎಲ್ಲರೂ ತಮ್ಮ ತಮ್ಮ ಕಾರ್ಯದಲ್ಲಿ ಮಗ್ನರಾದುದು ಬಕ್‌ಗೆ ತಿಳಿ ಯಿತು. ನಾಯಿಗಳಿಗೂ ಕೆಲಸ ಹತ್ತಿತ್ತು. ಹಗಲೆಲ್ಲ ಅವು ಬೀದಿಗಳಲ್ಲೆಲ್ಲ ತಿರುಗುತ್ತಿದ್ದವು. ರಾತ್ರಿ ಸಹ ಗೆಜ್ಜೆಯ ಸಪ್ಪಳ ಕೇಳುತ್ತಿತ್ತು. ಸಾಂತಾ ಕ್ಲೆರಾ ಕೊಳ್ಳದಲ್ಲಿ ಕುದುರೆಗಳು ಮಾಡುವ ಕೆಲಸವನ್ನೆಲ್ಲ ಇಲ್ಲಿ ನಾಯಿಗಳೇ ನಿರ್ವಹಿಸುತ್ತಿದ್ದವು. ಕೆಬಿನ ಕಟ್ಟಿಗೆ, ಉರುವಲು ನಾಯಿಗಳೇ ಎಳೆದು ತರುವ ಪರಿಪಾಠ. ದಕ್ಷಿಣ ಪ್ರದೇಶದ ನಾಯಿಗಳ ಸಂದರ್ಶನ ಬಕ್‌ನಿಗಾಗು ತ್ತಿತ್ತು. ಆದರೆ ಹಸ್ಕಿ ನಾಯಿಗಳ ಸಂಖ್ಯೆಯೇ ದೊಡ್ಡದು. ಅವು ರಾತ್ರಿಯಲ್ಲಿ ಹಾಡು ಹಾಡುವಾಗ ಬಕ್ ಧ್ವನಿಗೂಡಿಸುತ್ತಿತ್ತು.

ಕೊರೆಯುವ ಚಳಿ, ಹಿಮ, ಮಂಜುಗಳ ಮಧ್ಯದಲ್ಲಿ ಕೇಳಿ ಬರುತ್ತಿದ್ದ ಹಸ್ಕಿ ನಾಯಿಗಳ ಹಾಡು, ಜೀವನದ ವಿಷಯಕ್ಕೆ ತಾತ್ಸಾರವನ್ನೆ ಸಾರಿ ಸಾರಿ ಹೇಳುತ್ತಿತ್ತು. ಅವರೇನು ? ಉದ್ವಿಗ್ನತೆ, ಬಿಕ್ಕಳಿಕೆ ಅಲ್ಲಿದ್ದವು ! ವಿಲಾಪ ಗೀತೆಯೆ ಎನ್ನಬಹುದು ಅದಕ್ಕೆ. ಅಸಂಖ್ಯ ತಲೆಮಾರುಗಳ ಛಾಯೆ ಅಲ್ಲಿ ಹುದುಗಿತ್ತು. ಹೆದರಿಕೆ, ರಹಸ್ಯ, ಕತ್ತಲೆ, ಚಳಿ ಆ ಹಾಡಿನ ಅಂಶಗಳು. ಈ ಹಾಡಿನಲ್ಲಿ ಆಸ್ಥೆ ಹುಟ್ಟಿದಾಗ ಇಂದಿನ ನವನಾಗರಿಕತೆಯ ನೆನಪೂ ಮಸಳಿಸಿ ಹೋಗದು.

ಏಳು ದಿನ ಡಾಸನ್ನಿನಲ್ಲಿ ಕಳೆಯುವಾಗ ಅವರು ನದೀ ತೀರದ ಬ್ಯಾರಾಕ್ಸು ಗಳಲ್ಲಿ ವಾಸಿಸಿದ್ದರು. ಮುಂದೆ ಡಿಯಾ ಮತ್ತು ಸಾಲ್ಟ ವಾಟರಿನ ಕಡೆಗೆ ಹೋದರು. ಪೆರಾಲ್ಟ ಮಹತ್ವದ ಕಾಗದ ಪತ್ರಗಳನ್ನು ಒಯ್ದಿದ್ದ. ಪ್ರವಾಸದ ಅಭಿಮಾನ ಅವನನ್ನಾವರಿಸಿತ್ತು. ಇದೀ ವರುಷದಲ್ಲಿ ಅವನು ಮಾದರಿಯ ಪ್ರವಾಸ ಕೈಕೊಂಡು ತೋರಿಸುವ ಹಂಬಲ ಇಟ್ಟುಕೊಂಡಿದ್ದನು. ಹಾಗೆ ಪರಿಸ್ಥಿತಿ ಅನುಕೂಲವೂ ಇದ್ದಿತು. ವಾರದ ಕೊನೆಗೆ ಶಿಬಿರದಲ್ಲಿ ವಿಶ್ರಾಂತಿ ದೊರೆತದ್ದರಿಂದ ನಾಯಿಗಳು ಚುರುಕಾಗಿದ್ದವು. ದಾರಿಯೂ ಸುಗಮವೆನ್ನು ವಂತೆ ತೋರಿತು. ನಾಯಿಗಳಿಗೂ ಜನರಿಗೂ ಪೋಲಿಸರು ಅಲ್ಲಲ್ಲಿ ಆಹಾರದ ಅನುಕೂಲತೆ ಒದಗಿಸಿದ್ದರು. ಪ್ರವಾಸದಲ್ಲಿ ಭಾರ ವಸ್ತುಗಳು ವಿಶೇಷವಿರಲಿಲ್ಲ.

ಮೊದಲ ದಿನ ಅರವತ್ತು ಮೈಲು ಸಾಧಿಸಿತು. ಪೆಲ್ಲಿಯ ದಾರಿಯಲ್ಲಿಯ ಮುಃಕಾನ್ನ ಬಾಯಿಯ ಬಳಿಯಲ್ಲಿ ಎರಡೇ ದಿನವಿದ್ದರು. ಫ್ರ್ಯಾಂಕೊಯಿಸ್ ಇಂತಹ ವೇಗಕ್ಕಾಗಿ ವಿಶೇಷ ಪರಿಶ್ರಮ ವಹಿಸದೇ ಗತ್ಯಂತರವಿರಲಿಲ್ಲ. ಬಕ್‌ನ ಬಂಡುಖೋರ ವೃತ್ತಿಯ ಮೂಲಕ ದಳದಲ್ಲೆಲ್ಲ ಒಕ್ಕಟ್ಟು ಚೆಲ್ಲಾಪಿಲ್ಲಿ ಯಾಗಿತ್ತು. ಬಕ್‌ನ ಪ್ರೋತ್ಸಾಹನೆಯ ಮೂಲಕ ಎಲ್ಲ ನಾಯಿಗಳಲ್ಲಿ ಶಿಸ್ತಿನ ಅಭಾವವೇ ಪ್ರಮುಖವಾಗಿದ್ದಿತು. ಸ್ಪಿಟ್ಜನ ಹಿರಿತನವನ್ನು ಯಾರೂ ಮನ್ನಿಸು ತ್ತಿರಲಿಲ್ಲ. ಅವರ ಅಧಿಕಾರಕ್ಕೇ ಆಹ್ವಾನ ಕೊಡುವ ಕಾಲ ಈಗ ಸಂಪ್ರಾಪ್ತ ವಾಗಿತ್ತು. ಬಕ್‌ನ ಬಲದ ಮೇಲೆ ಪೈಕ್ ಒಂದು ಇರುಳು ಮೀನು ಕದ್ದಿತು; ನುಂಗಿಬಿಟ್ಟಿತು. ಮತ್ತೊಂದು ಇರುಳು ಡಬ್ ಹಾಗೂ ಜೊ ಸ್ಪಿಟ್ಜನೊಡನೆ ಕಾದಾಡಿ ಶಿಕ್ಷೆ ತಪ್ಪಿಸಿಕೊಂಡವು. ಬಿಲ್ಲಿಯಂಥ ಸಂಭಾವಿತ ನಾಯಿ ಕೂಡ ಈಗ ಕೊಂಚ ಅವಿವೇಕಿಯಾಗಿತ್ತು. ಸ್ಪಿಟ್ಜನನ್ನು ಕಂಡ ಸರತಿಗೊಮ್ಮೆ ಬಕ್

ಒವ್ ಎನ್ನುವದು; ಗುರುಗುಟ್ಟುವದು. ಸ್ಪಿಟ್ಜನನ್ನು ಅವಮಾನಗೊಳಿಸುವದೇ ಅದಕ್ಕೆ ಇತ್ತೀಚೆಗೆ ಚಟವಾಗಿ ಹೋಗಿತ್ತು !

ನಿಯಮಗಳನ್ನು ಉಲ್ಲಂಘಿಸುವ ಪ್ರವೃತ್ತಿ ಬೆಳೆದಂತೆ ನಾಯಿಗಳಲ್ಲಿ ಯ ವೈಯಕ್ತಿಕ ಸಂಬಂಧಕ್ಕೂ ತಿಲಾಂಜಲಿಯಾಯಿತು. ತಮ್ಮಲ್ಲಿಯೇ ಅನ ವಶ್ಯಕ ಮನಸ್ತಾಪ ಕಚ್ಚಾಟ ನಡೆದವು. ಕೊನೆಗೆ ಶಿಬಿರ ಹುಚ್ಚರ ಆಸ್ಪತ್ರೆಯೆ ಎನಿಸತೊಡಗಿತು ! ಡೇವ್ಸ್ ಸೊಲೆಕ್ಸ ಎರಡೇ ನಾಯಿಗಳಲ್ಲಿ ಯಾವ ಪರಿ ವರ್ತನೆ ಕಾಣಲಿಲ್ಲ. ಆದರೆ ಆಗೀಗ ಅವಕ್ಕೂ ಸಿಟ್ಟು ಬಹು ಬೇಗ ಬರು ತ್ತಿತ್ತು. ಫ್ರಾಂಕೊಯಿಸ ವಿವಿಧ ಬಗೆಯಾಗಿ ಶಪಥ ಮಾಡಿದ. ಜಟ ಅಪ್ಪಳಿಸಿದ. ಚಬಕದ ' ಸುಸ್ವರ ' ನಾಯಿಗಳ ಮೇಲೆಲ್ಲ ಹರಡಿತು. ಆದರೆ ಇದನ್ನು ಕೇಳುವವರಾರು ? ಸ್ವಲ್ಪ ಕಣ್ಮರೆಯಾದನೊ ಮತ್ತೆ ಅದೇ ಕಾಯಕ ! ಚಬಕದಿಂದ ಅವನು ಸ್ಪಿಟ್ಜನನ್ನು ಹುರಿದುಂಬಿಸುತ್ತಿದ್ದರೆ, ಬಕ್ ಉಳಿದವು ಗಳನ್ನು ತನ್ನೆಡೆ ಒಲಿಸಿಕೊಳ್ಳುತ್ತಿತ್ತು. ಎಲ್ಲ ತೊಂದರೆಗೆ ಬಕ್ ಕಾರಣ ಎಂದು ಫ್ರಾಂಕೊಯಿಸ್‌ನಿಗೆ ಗೊತ್ತು. ಅವನಿಗೆ ಗೊತ್ತಾದದ್ದು ಬಕ್‌ಗೂ ಗೊತ್ತಾ ಗಿತ್ತು. ಆದರೆ ಅಪರಾಧಿಯಾಗಿ ಅವನಿಗೆ ಕೈಗೆ ಸಿಗುವಷ್ಟು ಎಬಡ ಪ್ರಾಣಿ ಆಗಿರಲಿಲ್ಲ ಬಕ್ ! ಜೀನು ಹಾಕಿದಾಗ ಅದರ ವಿಶ್ವಾಸುಕತೆ ಎಂತಹದು ! ಪ್ರವಾಸವೆಂದರೆ ಅದರ ಮೈ ಉಬ್ಬುತ್ತಿತ್ತು. ಜಗಳದಲ್ಲಿ ಕೂಡಿಕೊಳ್ಳುವಾಗಲೂ ಅಷ್ಟೇ ಉನ್ಮಾದ !

ತಹಕೀನದ ಮುಖದಲ್ಲಿ ಒಂದು ಇರುಳು ಡಬ್, ಮೊಲವನ್ನು ಎಬ್ಬಿ ಸಿತು. ಹಿಡಿಯಲೂ ಆಗಲಿಲ್ಲ. ಇಡಿ ದಳದಲ್ಲೆಲ್ಲ ಕ್ಷಣಾರ್ಧದಲ್ಲಿ ಕೋಲಾ ಹಲವೆದ್ದಿತು. ನೂರು ಯಾರ್ಡು ದೂರದಲ್ಲಿ,ಐವತ್ತು ಹಸ್ಕಿಗಳನ್ನಿಟ್ಟ ಪೋಲೀಸರ ಶಿಬಿರವಿದ್ದಿತು. ಅವೂ ಬೆನ್ನಟ್ಟಿದವು. ಮೊಲ ಒಂದು ಹೊದರಿನಲ್ಲಿ ಹಿಮದಲ್ಲಿ ಸೇರಿಬಿಟ್ಟಿತು. ನಾಯಿಗಳು ಶಕ್ತಿ ಮೀರಿ ಓಡಿದವು. ಮೊಲ ಸಹಜವಾಗಿ ಅವನ್ನೆಲ್ಲ ತಪ್ಪಿಸಿತು. ಅರವತ್ತು ನಾಯಿಗಳನ್ನು ಬಕ್ ಕರೆದು ಕೊಂಡು ಮೊಲ ಹೋದಲ್ಲೆಲ್ಲ ಅಂಕುಡೊಂಕಾಗಿ ಹೋದರೂ ಹಿಡಿಯುವದಾಗ ಲಿಲ್ಲ. ಬೆಳ್ದಿಂಗಳಲ್ಲಿ ಸುಮ್ಮನೆ ಬಿದ್ದುಕೊಂಡಿತು.

ಮನುಷ್ಯನ ಆಕಾಂಕ್ಷೆಗಳೂ ವಿಲಕ್ಷಣವಿದ್ದು ತನ್ಮೂಲಕ ಅವನು ಅಡವಿ ಅಡವಿ ಅಲೆದಾಡುವಂತೆ ಬಕ್ ಸಹ ರಕ್ತದ ಆಸೆಗಾಗಿ, ಕೊಲ್ಲುವ ಹುರುಪಿಗಾಗಿ ಹೀಗೆ ಬೆನ್ನಟ್ಟಿತ್ತು.

ಜೀವನವಲ್ಲೊಂದು ಆನಂದದ ಸಮಯ ಒದಗುವದು. ಅದೇ ಅದರ ಔನ್ನತ್ಯ. ಆ ರಸ ನಿಮಿಷ ದಾಟಿ ಜೀವನ ಮುಂದುವರಿಯದು. ವ್ಯಕ್ತಿ ಜೀವದಿಂದಿರುವಾಗ ಮಾತ್ರ ಈ ರೋಮಾಂಚಕಾರಿ ಪ್ರಸಂಗ ಬರುವದು. ಮೈಮರೆವು ಉಂಟುಮಾಡುವದು. ಕಲಾವಿದನಿಗೆ ಇಂತಹ ಸುವರ್ಣ ಸಂಧಿ ಉಂಟಾಗುವದು. ಯುದ್ಧರಂಗದಲ್ಲಿಯ ಸೈನಿಕನಿಗೂ ಇದು ಸಾಧ್ಯ. ಬಕ್‌ನಿಗೂ ಇಂತಹ ರಸಮಯ ಸಮಯ ಸಂಪ್ರಾಪ್ತವಾಗಿತ್ತು. ಆಗ ನರನರಗಳೆಲ್ಲ ಜೀವನದ ಕ್ಷಣಭಂಗುರತೆ ಮರೆತು ಆನಂದಪುಲಕಿತವಾಗಿ ಕಾರ್ಯ ತತ್ಪರವಾದವು. ಸಜೀವ ಬೆಳ್ದಿಂಗಳ ವಾತಾವರಣದಲ್ಲಿ ಬಕ್ ಚೈತನ್ಯದಾಗರವಾಗಿದ್ದಿತು.

ಆದರೆ ಸ್ಪಿಟ್ಜು ಕೇವಲ ಕುಳಿತು ಲೆಕ್ಕ ಹಾಕುವ ನೀರಸ ಜೀವಿ. ಕೆಲಸ ವಾಗದ್ದಕ್ಕೆ ಕೈ ಬಿಟ್ಟುಬಿಟ್ಟಿತು. ಮೊಲಕ್ಕಿಂತ ಅದರ ಕಣ್ಣೆದರು ಈಗ ಬೇರೊಂದು ದೊಡ್ಡ ಮೊಲ ಬಿದ್ದಿತು. ಅದೆ ಬಕ್. ಮೊಲ ಬರಲಿಲ್ಲ. ಅದು ಚಿಂತಾಕ್ರಾಂತವಾಗಿ ಚೀತ್ಕರಿಸಿತು. ಮತ್ತೆ ಈರ್ಷಿರಲ್ಲಿ ಹಗೆತನ ಮೊದಲಾಯಿತು. ಕದಿದಾಡತೊಡಗಿದವು. ಉಕ್ಕಿನ ಪಂಜರದಂತಹ ಹಲ್ಲುಗಳು. ಕೇಳುವದೆ ?

ಮಿಂಚಿನ ವೇಗದಲ್ಲಿ ಅವಕ್ಕೆ ಕಲ್ಪನೆ ಹೊಳೆಯಿತು. ಕಾಲ ಸಮೀಪಿಸಿತು. ಮರಣದ ದಾರಿ ಕಾಣಹತ್ತಿತು. ಒಂದನ್ನೊಂದು ತಪ್ಪಿಸಿ ಕೊಲ್ಲ ಲೆತ್ನಿಸುವಾಗ ಬಕ್‌ಗೆ ಹಿಂದಿನ ನೆನಪೆಲ್ಲ ಸುರುಳಿ ಸುರುಳಿಯಾಗಿ ತೆರೆಯತೊಡಗಿದವು—ಶುಭ್ರ ಕಾನನ, ಭೂಮಿ, ಬೆಳ್ದಿಂಗಳು, ಯುದ್ಧೋನ್ಮಾದ ! ಸ್ಮಶಾನ ಶಾಂತತೆ ಸುತ್ತಲು. ಗಾಳಿಯು ಸುಳಿವಿಲ್ಲ; ಎಲೆಗಳ ಸರಿದಾಟವಿಲ್ಲ; ನಾಯಿಗಳ ದೀರ್ಘನಿಶ್ವಾಸ ಮಾತ್ರ ಸ್ಫುಟವಾಗಿತ್ತು. ನೆಪ ಮಾತ್ರ ಮೊಲ. ಆದರೆ ತೋಳದಂತಹ ನಾಯಿಗಳು ಇನ್ನೂ ಸುಮ್ಮನಾಗಿದ್ದಿಲ್ಲ. ನಿಸರ್ಗದ ಕ್ರಮವೇ ಎನ್ನುವಂತೆ ಎರಡೂ ಪ್ರಾಣಿಗಳಿಗೆ ಇನ್ನೂ ಬೇಜಾರ ತಲೆದೋರಲಿಲ್ಲ.

ಸ್ಪಿಟ್ಜು ನುರಿತ ಯೋಧ. ಕಾನಡಾ, ಬ್ಯಾರನ್ಸಗಳಲೆಲ್ಲಾ ತಿರುಗಾಡಿ ಅದು ವಿವಿಧ ಜಾತಿಯ ನಾಯಿಗಳೊಡನೆ ಸಂಪರ್ಕವಿರಿಸಿಕೊಂಡಿತ್ತು. ಪ್ರಭುತ್ವವನ್ನೂ ಪ್ರಾಸ್ಥಾಪಿಸಿತ್ತು. ಅದರ ಸಿಟ್ಟು ಅತ್ಯುಗ್ರ. ಆದರೆ ನಿರ. ರ್ದಿಷ್ಯ ಎಲ್ಲ. ತನ್ನಂತೆ ತನ್ನ ಶತ್ರು ಕೂಡ ಸೇಡಿನದು ಎಂಬ ಪ್ರಜ್ಞೆ ಅದಕ್ಕಿದ್ದಿತು. ಎದುರಾಳಿ ಏರಿ ಬಾರದ ವಿನಹಾ ತಾನೆ ಮುಂಧಾಗುತ್ತಿದ್ದಿಲ್ಲ ಸ್ವಸಂರಕ್ಷಣೆ ಅದರ ಜೀವಿತದ ರಹಸ್ಯ.

ಬಕ್ ಈ ದೊಡ್ಡ ಬಿಳಿ ನಾಯಿಯನ್ನು ಕಡಿದು ಹಣ್ಣಿಗೆ ತರಲು ವ್ಯರ್ಥವಾಗಿ ಹವಣಿಸಿತು. ತಾನು ಕಡಿದಾಗೊಮ್ಮೆ ಸ್ಪಿಟ್ಝ್ ಸಹ ಕಡಿಯುತ್ತಿತ್ತು. ಹಲ್ಲಿಗೆ ಹಲ್ಲು ತಾಕಲಾಡುತ್ತಿದ್ದವು. ತುಟಿ ಹರಿದು ರಾಮಾರಕ್ತವಾದವು. ಆದರೂ ಬಕ್‌ನ ಆಟ ನಡೆಯಲಿಲ್ಲ. . ಪ್ರಯತ್ನ ನಡಿಸಲಿಲ್ಲ. ಸುಂಟರಗಾಳಿಯಂತೆ ಶತ್ರುವಿನ ಮೇಲೆ ದಿಕ್ಕು ದಿಕ್ಕಿನಿಂದ ಏರಿಹೋಯಿತು. ಹಿಮುವಷ್ಟು ಬಿಳಿಯ ಗಂಟಲಿಗೆ ಹಾರಲು ಅತಿಯಾಗಿ ತವಕಿಸಿತು. ಪ್ರತಿ ಸಲ ಸ್ಪಿಟ್ಝ್ ಪೆಟ್ಟು ಕೊಡಹಿ ಪಾರಾಗುತ್ತಿತ್ತು. ಟಗರಿನಂತೆ ಕಾದಾಡಲೂ ಹವಣಿಸಿತು—ಹೆಗಲಿಗೆ ಹೆಗಲು ಹಚ್ಚಿ. ಅಲ್ಲಿ ಸಹ ಹಿಂತೆಗೆಯಬೇಕಾಯಿತು.

ಸ್ಪಿಟ್ಝ್‌ನಿಗೆ ಗಾಯದ ಲವಲೇಶವಿರಲಿಲ್ಲ. ಆದರೆ ಬಕ್ ರಕ್ತದಲ್ಲಿ ಮಿಂದಂತಾಗಿತ್ತು. ಯುದ್ಧಕ್ಕೆ ಕಾವೇರತೊಡಗಿತು. ಅಂಕುಡೊಂಕಾಗಿ ಬಕ್ ಏರಿಬರುವಾಗ ಸ್ಪಿಟ್ಝ್ ತಡೆಯಲೆತ್ನಿಸುತ್ತಿತ್ತು. ಕಾಲುಗಳಲ್ಲಿ ದೃಢತೆ ತಂದು ಕೊಂಡಿತ್ತು.

ಬಕ್‌ನ ಒಂದು ಸದ್ಗುಣವೆಂದರೆ ಕಲ್ಪಕತೆ. ಅದು ಹುಟ್ಟು ಯೋಧ. ತಲೆಯಿಂದಲೂ ಹೊಡೆದಾಡಲು ಕಲಿತಿತ್ತು. ಹಲ್ಲಿನಿಂದ ಸ್ಪಿಟ್ಝ್‌ನ ಎಡಗಾಲು ಹಿಡಿಯಿತು. ಎಲುವು ಮುರಿದಂತಾಗಿ ಮೂರು ಕಾಲಿನಿಂದ ಅದು ಹೋರಾಡ ಹತ್ತಿತು. ಎಷ್ಟು ಹವಣಿಸಿದರೂ ಏರಿಹೋಗುವದಾಗದೆ ಮುಂದಿನ ಬಲಗಾಲಿಗೆ ಎರವಾಗಬೇಕಾಯಿತು. ಇಂತಹ ಅಸಹಾಯ ಸ್ಥಿತಿಯಲ್ಲಿಯೂ ಎದೆಗುಂದಲಿಲ್ಲವದು ! ಹುಚ್ಚು ಅವೇಶ ತುಂಬಿತ್ತು. ಈ ಸನ್ನಿವೇಶದಲ್ಲಿ ಮಾತ್ರ ಅದರ ಕೈ ಸಾಗಲಿಲ್ಲ.

ಎಲ್ಲ ಆಸೆ ತೊರೆದಿತು. ಬಕ್ ಮನಸ್ಸು ಕಲ್ಲುಮಾಡಿತು. ಸಾಮಾನ್ಯ ಪ್ರಸಂಗಗಳಲ್ಲಿ ದಯೆ ಮಾಯೆಗೆ ಎಡೆ. ಯುದ್ಧದ ಕೊನೆಯ ಹಂತಕ್ಕೆ ಅಡಿ ಇರಿಸಿತು. ಉಳಿದ ಹಸ್ಕಿ ನಾಯಿಗಳು ಬಂದವು. ಸ್ಪಿಟ್ಝ್‌ನ ಮೇಲೆ ಹಾರಲು ಅವೆಲ್ಲ ಹವಣಿಸುತ್ತಿದ್ದವು. ಕ್ಷಣ ಕಾಲ ಎಲ್ಲೆಡೆ ನೀರವ. ಎಲ್ಲವನ್ನು ಕಂಡು ಸ್ಪಿಟ್ಝ್ ಎದೆಯೊಡೆದುಕೊಂಡಿತು. ಮರಣ ತಪ್ಪಿಸಿಕೊಳ್ಳಲು ಹೆಣಗಿತು. ಬಕ್ ಟಣ್ಣನೆ ಅದರೆಡೆ ಹಾರಿತು. ಉಳಿದುವೆಲ್ಲ ಗುಳುಗುಂಪಾಗಿ ಸ್ಪಿಟ್ಝ್‌ನನ್ನು ಮುತ್ತಿದವು. ಇನ್ನೆಲ್ಲಿಯ ಸ್ಪಿಟ್ಝ್ ? ಮೂಲಭೂತ ಪ್ರಕೃತಿಯ ಕರಾಳ ಕೈ ಮೇಲಾಯಿತು !



## ೪. ಹಿರಿತನದ ಪಟ್ಟವಾರಿಗೆ ?

'ನಿಜವಾಗಿ ಹೇಳಬೇಕೆಂದರೆ ಬಕ್ ದೆವ್ವವೇ ಸೈ !' ಬಕ್‌ನ ಮೈತುಂಬ ಗಾಯಗಳಾಗಿ ಸ್ಪಿಟ್ಜ್ ಮರುದಿನ ಕಾಣದಾದಾಗ ಫ್ರಾಂಕೊಯಿಸ್‌ನ ಉದ್ಗಾರ ಇದು. ಬೆಂಕಿಯ ಬೆಳಕಿಗೆ ಒಯ್ದು ಗಾಯಗಳನ್ನು ತೋರಿಸಿದನು.

'ಸ್ಪಿಟ್ಜ್ ಸಹ ಮಹಾಮಾರಿ !' ಎಂದು ಸ್ಪೈಯಲ್ಲಿಯ ಸೀಳು ನಿರೀಕ್ಷಿಸುತ್ತ ಪೆರಾಲ್ಟ ನುಡಿದ.

'ಇನ್ನೇನು ? ಸ್ಪಿಟ್ಜ್ ಕಣ್ಮರೆಯಾಯಿತಲ್ಲ ! ಎಲ್ಲಿಯ ಪೇಚು ?' ಎಂದು ಫ್ರಾಂಕೊಯಿಸ್ ಉತ್ತರಿಸಿದ.

ಪೆರಾಲ್ಟ ಶಿಬಿರದ ವಸ್ತುಗಳನ್ನು ಅಣಿಗೊಳಿಸತೊಡಗಿದಾಗ ನಾಯಿಯ ಮಾರ್ಗದರ್ಶಕ ಜೀನು ಹಾಕುವದರಲ್ಲಿ ತಲ್ಲೀನನಾಗಿದ್ದ. ಸ್ಪಿಟ್ಜ್ ರೂಢಿಯಂತೆ ನಿಲ್ಲುವ ಸ್ಥಳಕ್ಕೆ ಬಕ್ ತಾನು ಮುಂದೆ ಹೋಗಿ ಆಢ್ಯತೆಯಿಂದ ನಿಂತುಕೊಂಡಿತು. ಇದೆಲ್ಲ ಲಕ್ಷ್ಯಕ್ಕೆ ಬಾರದೆ ಫ್ರಾಂಕೊಯಿಸ್ ಸೊಲೆಕ್ಸನನ್ನು ಆ ಚುಕ್ಕಾಣಿಯ ಜಾಗೆಗೆ ತಂದನು. ಅವನ ದೃಷ್ಟಿಯಲ್ಲಿ ಉಳಿದ ನಾಯಿಗಳಲ್ಲೆಲ್ಲ ಇದೇ ಆ ಪಟ್ಟ ಕಟ್ಟಿಸಿಕೊಳ್ಳಲು ಯೋಗ್ಯವೆಂದಾಗಿತ್ತು. ಇದನ್ನು ಕಂಡು ಬಕ್ ಟಣ್ಣನೆ ಸೊಲೆಕ್ಸಿನ ಮೇಲೆ ಸಿಟ್ಟಿನಿಂದ ಹಾರಿ ಅದನ್ನು ಹಿಂದಕ್ಕೆ ಸರಿಸಿತು.

"ಏ, ಏ" ಎಂದು ಫ್ರಾಂಕೊಯಿಸ್ ಎಚ್ಚರಿಸತೊಡಗಿದ.

ಆದರೂ ಬಕ್ ಸ್ವಲ್ಪವೂ ಸ್ಥಳ ಬಿಟ್ಟು ಕದಲಲಿಲ್ಲ. ಕುತ್ತಿಗೆ ಹಿಡಿದು ಬೇರೆಡೆಗೆ ನಿಲ್ಲಿಸಿ ಮತ್ತೆ ಸೊಲೆಕ್ಸನನ್ನು ಆ ಸ್ಥಳಕ್ಕೆ ಒಯ್ದ. ಅದು ಹೆದರಿಸ ಬೆಳಸಿದರೂ ಲಕ್ಷಿಸಲಿಲ್ಲ. ಮುದಿನಾಯಿ ಸೊಲೆಕ್ಸ ಇಷ್ಟೊಂದು ಉದ್ದನೀರಿಗೆ ಹೋಗಿ ಬಕ್‌ನೊಡನೆ ದ್ವೇಷ ಕಟ್ಟಿಕೊಳ್ಳುವ ಮನಸ್ಸು ಮಾಡಲಿಲ್ಲ. ಹಿಂದಕ್ಕೇ ಸರಿಯುತ್ತಿತ್ತು. ಸೊಲೆಕ್ಸನ ಮನಸ್ಸಿಲ್ಲದಿದ್ದರೂ ಜುಕ್ಕುಜುಲುಮೆಯಿಂದ ಹೀಗೆ ಮಾಡಿದ್ದಕ್ಕೆ ಬಕ್ ಮತ್ತೆ ಅದನ್ನು ಸರಿಸಿತು— ಫ್ರಾಂಕೊಯಿಸ್ ಬೇರೆ ಕಡೆಗೆ ಮುಖ ಮಾಡಿದಾಗ !

ಫ್ರ್ಯಾಂಕೊಯಿಸನ ಸಿಟ್ಟು ಎಲ್ಲೆ ಮೀರಿತು. ಪಾಠ ಕಲಿಸುವೆನೆಂದು ಭಾರವಾದ ಟೊಣಪೆ ತೆಗೆದುಕೊಂಡು ಬಂದ.

ಹಿಂದಕ್ಕೆ ತನ್ನನ್ನು ಹೀಗೇ ಪೀಡಿಸಿದ ಕೆಂಪು ಸ್ವೆಟರಿನ ಮನುಷ್ಯನ ನೆನಪು ಬಕ್‌ನ ಮನಸ್ಸಿನಲ್ಲಿ ಮಿಂಚಿಹೋಯಿತು. ಸ್ವಲ್ಪ ಹಿಂದಕ್ಕೆ ಸರಿದಿತು. ಸೊಲೆಕ್ಸನನ್ನು ಮತ್ತೆ ಮುಂದೆ ತಂದು ಹೂಡುವಾಗ ಏರಿಬರಲಿಲ್ಲ. ಟೊಣ ಪೆಯು ಅಳವಿನಿಂದ ಮಾತ್ರ ಪಾರಾಗಿ ಹಿಂದೆ ನಿಂತಿತು. ಸಿಟ್ಟಿನಿಂದ ಗುರ್ರೆನ್ನ ತೊಡಗಿತು. ಒಂದು ವೇಳೆ ಅದನ್ನು ತೂರಿ ಒಗೆದರೂ ತಪ್ಪಿಸಿಕೊಳ್ಳುವ ಹಂಚಿಕೆ ಯಲ್ಲಿತ್ತು.

ಬಂಡಿಯ ವಾಹಕ ತನ್ನ ಕಾರ್ಯದಲ್ಲಿ ತೊಡಗಿ ಡೇವ್ನನ ಮುಂದೆ ನಿಲ್ಲಲು ಬಕ್‌ನನ್ನು ಕರೆದನು. ಎರಡು ಹೆಜ್ಜೆ ಹಿಂದೆ ಸರಿದಿತು. ಫ್ರ್ಯಾಂಕೊಯಿಸ್ ಮುಂದೆ ಬಂದಾಗ ಅದು ಮತ್ತೆ ಎರಡು ಹೆಜ್ಜೆ ಹಿಂದೆ ಹೋಯಿತು. ಹೊಡೆತಕ್ಕೆ ಬಕ್ ಹೆದರುವದೆಂದು ತಿಳಿದು ಅದರೆಡೆಗೆ ಅವನು ಟೊಣಪೆ ಒಗೆದನು. ಬಕ್ ನೇರವಾಗಿ ಅವನಿಗೆ ತಿರುಗಿ ನಿಂತಿತು. ಹೊಡೆದರೂ ಚಿಂತೆ ಇಲ್ಲ, ಮುಯ್ಯಾ ದೆಯ ಮಹಲು ತ್ಯಜಿಸೆನು ಎಂಬ ಹಟ ಅದರಲ್ಲಿ ಕಾಣಿಸಿಕೊಂಡಿತು. ಮೇಲಿನ ಸ್ಥಾನ ತನ್ನ ಸೊತ್ತು; ವಿಕ್ರಮದಿಂದ ಗಳಿಸಿದ್ದು; ಕೆಳಗಿನ ಸ್ಥಳದಲ್ಲಿ ಉಳಿಯು ವದು ಕುಂದು ಎಂಬ ಭಾವನೆ ಅದರದಾಗಿತ್ತು.

ಒಂದು ತಾಸು ಹೀಗೆ ಗುದ್ದಾಟವಾಯ್ತು. ಟೊಣಪೆ ಒಗೆದರು ಬಕ್ ನೆಡೆಗೆ. ಅದು ತಪ್ಪಿಸಿಕೊಂಡಿತು. ಅವರು ಬಹು ಬಗೆಯಾಗಿ ಅದನ್ನು ಶಪಿಸಿ ದರು. ಕುಲಕೋಟಿಯ ಉದ್ಧಾರ ಕೂಡ ಮಾಡಿದರು. ಆದರೂ ಎಲ್ಲಕ್ಕೂ ಗುರುಗುಟ್ಟಿ ಕೈಗೆ ಸಿಗದಷ್ಟು ದೂರ ಹೋಗಿ ನಿಂತುಬಿಟ್ಟಿತ್ತು. ಓಡಿಹೋಗಲು ಮನಸ್ಸು ಮಾಡಲಿಲ್ಲ. ಅಲ್ಲಿಯೆ ಶಿಬಿರದ ಸುತ್ತಲು ಅಲೆದಾಡತೊಡಗಿತು. ತನಗೆ ನ್ಯಾಯ ಸಿಕ್ಕಾಗ ಮಾತ್ರ ಬಂದು ಕೆಲಸ ಕೈಕೊಳ್ಳುವೆನೆಂಬ ಜಾಹೀರಾ ತಿನ ಮುಖಮುದ್ರೆ ಅದರದಾಗಿತ್ತು.

ಫ್ರ್ಯಾಂಕೊಯಿಸ್ ಹಣೆಗೆ ಕೈ ಹಚ್ಚಿ ಕ್ಷಣಕಾಲ ಮೌನಿಯಾಗಿ ಕುಳಿತ. ಕಾಲ ಹಾರುತ್ತಿತ್ತು. ಈಗ ಕಾಲ್ದಾರಿ ಕ್ರಮಿಸಿ ತಾಸಾಗಿರಬೇಕಾಗಿತ್ತು. ಅವನು ಎದುರಾಳಿಯನ್ನು ರಮಿಸಿ ಕುರಿಮರಿಯನ್ನು ಚಪ್ಪರಿಸುವಂತೆ ಪ್ರಯತ್ನಿಸಿದ. ಇದೇ ಹೆಗಲಿಗೆ ಹೊಡೆದದ್ದು ಎಂದು ಅದು ಹೆಗಲು ಕೊಡಹಿತು. ಆಮೇಲೆ

ಫ್ರ್ಯಾಂಕೊಯಿಸ್ ಸೊಲೆಕ್ಸನ ಬಳಿಗೆ ಹೋಗಿ ನಿಂತು ಬಕ್‌ನನ್ನು ಕೂಗಿ ಕರೆದ. ನಗುತ್ತ ಹೋಯಿತು ಬಕ್. ಬಂಡಿಯ ನೊಗ ಅಚ್ಚುಕಟ್ಟಾಗಿ ಕುಳಿತಿತು. ಕೊನೆಗೂ ಬಕ್‌ನಿಗೆ ಮುಂದಿನ ಸ್ಥಳವೇ ಸಿಕ್ಕಿತು ! ಮತ್ತೆ ಮತ್ತೆ ಫ್ರ್ಯಾಂಕೊಯಿಸ್ ಬಕ್‌ನನ್ನು ಅಚ್ಚೆಯಿಂದ ಕರೆದ. ಮತ್ತೆ ಮತ್ತೆ ಅದು ಸಲುಗೆಯಿಂದ ನಕ್ಕಿತು.

'ಬೊಣಪೆಯನ್ನು ಚೆಲ್ಲಿಬಿಡು' ಎಂದು ಪೆರಾಲ್ಟ್ ಆಜ್ಞಾಪಿಸಿದ.

ಫ್ರ್ಯಾಂಕೊಯಿಸ್ ಹಾಗೇ ಮಾಡಿದ. ವಿಜಯಿಯಂತೆ ಆಗ ಬಕ್ ನಕ್ಕಿತು. ಮುಂದಾಳಾಗಿ ನಿಂತಿತು. ನಿರಾಯಾಸವಾಗಿ ಕಾಲ್ದಾರಿ ಕ್ರಮಿಸ ತೊಡಗಿತು.

ದಿವಸದ ಪ್ರಾರಂಭಕ್ಕೇ ತಾನು ಬಕ್‌ನ ನಿಜವಾದ ಯೋಗ್ಯತೆಯನ್ನು ತಿಳಿಯಲಿಲ್ಲವೆಂದು ಬಂಡಿಯ ವಾಹಕನಿಗೆ ಈಗ ಎನಿಸತೊಡಗಿತು. ಮುಂದಾಳು ವಿನ ಹೊಣೆಯನ್ನವನು ಅದರ ಮೇಲೆ ಹೊರಿಸಿದ. ನಿರ್ಣಾಯಕ ಬುದ್ಧಿ, ಚತುರತನ, ಕಾರ್ಯದಕ್ಷತೆಗಳಿಗಾಗಿ ಫ್ರ್ಯಾಂಕೊಯಿಸ್ ಸ್ಪಿಟ್ಜ್‌ನಿಗೆ ಮೇಲಿನ ಮಾನ ಕೊಟ್ಟಿದ್ದ. ಈಗ ಅದೆಲ್ಲ ಸುಳ್ಳಾಗಿ ಬಕ್‌ನನ್ನು ಸರಿಗಟ್ಟುವ ವರಾರೂ ಉಳಿಯಲಿಲ್ಲ.

ಕಾಯಿದೆಗಳನ್ನು ಯೋಜಿಸಿ ಅಮಲಿನಲ್ಲಿ ತರುವ ಕಲೆ ಬಕ್‌ನಿಗೆ ಚೆನ್ನಾಗಿ ಸಾಧಿಸಿತ್ತು. ಡೇವ್ಸ್ ಸೊಲೆಕ್ಸರು ಈ ಆಡಳಿತದ ಬದಲಾವಣೆಯನ್ನು ಪರಿಗಣಿಸಲಿಲ್ಲ. ಅದನ್ನು ತೆಗೆದುಕೊಂಡು ತಾವೇನು ಮಾಡುವವರೆಂಬಂತೆ ಅವು ತಾತ್ಸಾರಭಾವವನ್ನೇ ತಳೆದಿದ್ದವು. ಕಾಯಿದೆಯಂತೆ ಕಾರ್ಯನಿರ್ವಹಿಸು ವದು ತಮ್ಮ ಧರ್ಮ ಎಂದು ತಿಳಿದಿದ್ದವು ಅವು. ಇಷ್ಟಕ್ಕೆ ಚ್ಯುತಿಬಾರದಿದ್ದರೆ ಸಾಕು, ಉಳಿದದ್ದು ಏನಾದರೇನೆಂದು ಅವು ಅಲಕ್ಷಿಸಿದ್ದವು. ಈ ಹೊಸ ವ್ಯವಸ್ಥೆಯಲ್ಲಿ ಬಿಲ್ಲಿ ಒಳ್ಳೆರೀತಿಯಿಂದ ನಡೆದುಕೊಂಡಿತು. ಸ್ಪಿಟ್ಜ್‌ನ ಹಿಂದಿನ ಆಳಿಕೆಯಲ್ಲಿ ಉಳಿದ ನಾಯಿಗಳು ಅರಾಜಕತೆಗೆ ಎಡೆ ಕಲ್ಪಿಸಿಕೊಟ್ಟಿದ್ದವು. ತಮಗೆ ಇಂತಹ ಸುಸ್ವರೂಪ ತಂದುಕೊಟ್ಟದ್ದಕ್ಕೆ ಅವೆಲ್ಲ ಬಕ್‌ನನ್ನು ನೆನಿಸ ತೊಡಗಿದವು.

ಬಕ್‌ನ ಹಿಂದೆ ಇರುತ್ತಿದ್ದ ಪೈಕ್ ಈ ಮೊದಲು ಬೇರೆಯವರ ಮೇಲೆ ಭಾರ ಚೆಲ್ಲುತ್ತಿತ್ತು. ಈಗ ಅದೇ ಅತಿ ಚುರುಕಾಗಿತ್ತು. ಒಂದೆಂದೂ ತೋರಿ

ಸಿದ ಉತ್ಸಾಹವನ್ನು ಈಗ ಪ್ರಕಟಗೊಳಿಸತೊಡಗಿತು. ಮೊದಲು ಇರುಳು ಶಿಬಿರದಲ್ಲಿ ಜೊನಿಗೆ ಶಿಕ್ಷೆಯಾಯಿತು. ಸ್ಪಿಟ್ಝ್ ಕೂಡ ಹಿಂದೆ ಇಂತಹ ಶಿಸ್ತಿನ ಕ್ರಮ ಕೈಕೊಂಡಿರಲಿಲ್ಲ ! ತನ್ನ ಭಾರದ ಬಲದಿಂದ ಬಕ್ ಅದನ್ನು ಹಿಚುಕಿ ಬಿಟ್ಟಿತ್ತು. ದಯಾಯಾಚನೆ ಮಾಡಿದಾಗ ಬಿಟ್ಟುಕೊಟ್ಟಿತು.

ದಳದ ಮಟ್ಟ ಈಗ ಮೇಲ್ತರಗತಿಯದಾಯಿತು. ಮೊದಲಿನ ಒಕ್ಕಟ್ಟು ಹಾಹಾ ಎನ್ನುವದರಲ್ಲಿ ಕಾಣತೊಡಗಿತು. ಟೀಕ, ಕೋನಾ ಎಂಬೆರಡು ಹಸ್ಕಿ ನಾಯಿಗಳು ಪಡೆಗೆ ಬಂದವು. ಅವನ್ನೂ ಬಕ್ ವಶಪಡಿಸಿಕೊಂಡದ್ದು ಕಂಡು ಫ್ರ್ಯಾಂಕೊಯಿಸ್ ಬೆರಳು ಕಚ್ಚಿಕೊಂಡ !

' ಇಂತಹ ನಾಯಿಯನ್ನು ನಾನೆಂದೂ ನೋಡಲಿಲ್ಲ. ಮಾರಿದರೆ ಇದಕ್ಕೆ ನಿಶ್ಚಿತವಾಗಿ ಸಾವಿರ ಡಾಲರ್. ನಿನ್ನ ಅಭಿಪ್ರಾಯವೇನು ಪೆರಾಲ್ಟ ? '

ಪೆರಾಲ್ಟ ಸರಿ ಎಂದ. ದಿನ ದಿನದ ವೇಗ ಹೆಚ್ಚುತ್ತಿತ್ತು. ಕಾಲು ದಾರಿಯೂ ಒಳ್ಳೆ ಸ್ಥಿತಿಯಲ್ಲಿತ್ತು. ಹಿಮದ ತೊಂದರೆ ಇರಲಿಲ್ಲ. ಚಳಿ ಮಾತ್ರ ವಿಶೇಷವಿತ್ತು. ಶೂನ್ಯದ ಕೆಳಗೆ ಐವತ್ತು ಅಂಶವೆಂದು ಉಷ್ಣತಾಮಾಪಕ ಯಂತ್ರ ತೋರಿಸಿತು. ಪ್ರವಾಸ ಹೊರಟಂದಿನಿಂದ ಹಿಗೆಯೇ ಇದ್ದಿತು. ನಾಯಿ ಗಳು ಆಗೀಗ ನಿಲ್ಲುತ್ತಿದ್ದರೂ ಪ್ರವಾಸ ಮುಂದುವರಿಯಲೇ ಬೇಕಾಗಿತ್ತು.

ಮೂವತ್ತು ಮೈಲಿನ ನದಿಯ ಮೇಲಿನ ಪ್ರವಾಸದಲ್ಲಿ ಹಿಮವೇ ಕಾಣು ತ್ತಿತ್ತು. ಹಿಂದೆ ಹತ್ತು ದಿನವೆಲ್ಲ ಕ್ರಮಿಸಿದ ದಾರಿ ಈಗ ಒಂದೇ ದಿನಕ್ಕೆ ಮುಗಿಯಿತು. ಲೇಕ್ ಲಿ ಬಾರ್ಜದಿಂದ ವ್ಹಾಯಿಟ್ ಹಾರ್ಸ ರ್‍ಯಾಪಿಡ್ಸದ ವರೆ ಗಿನ ಅರವತ್ತು ಮೈಲಿನ ದಾರಿ ಒಂದೇ ದಿನದಲ್ಲಿ ಕ್ರಮಿಸಿಹೋಯಿತು. ದಳದ ಸಂಗಡ ಹಗ್ಗದ ತುದಿಗೆ ಓಡುವ ಮನುಷ್ಯ ಹಿಂದೇ ಬೀಳುತ್ತಿದ್ದ. ಎರಡನೆಯ ವಾರದ ಕೊನೆಯ ದಿನ ಅವರು ವ್ಹಾಯಿಟ್ ಪಾಸ್ ದಾಟಿ ಸಮುದ್ರದ ಇಳು ಕಲಿಗೆ ಬಂದು ತಂಗಿದರು.

ಅದು ಸಂಸ್ಮರಣೀಯ ಯಾತ್ರೆ. ಎರಡುವಾರವೆಲ್ಲ ಪ್ರತಿದಿನ ನಲವತ್ತು ಮೈಲಿನಂತೆ ದಾರಿ ಸಾಗುತ್ತಿತ್ತು. ಮೂರು ದಿನ ಪೆರಾಲ್ಟ ಹಾಗೂ ಫ್ರ್ಯಾಂಕೊ ಯಿಸ್ ಸ್ಕಾಗ್ವೇದ ಬೀದಿಗಳಿಂದ ಪೆಟ್ಟಿಗೆಗಳನ್ನು ಸಾಗಿಸಿದರು. ಪಟ್ಟಣದ ಸ್ವಚ್ಛತೆಯೂ ನಡೆಯಿತು. ಅನಂತರ ಸರಕಾರದ ಆಜ್ಞೆ ಹೊರಟವು. ಫ್ರ್ಯಾಂಕೊಯಿಸ್, ಬಕ್‌ನನ್ನು ಬಳಿಗೆ ಕರೆದು ಗೋಳೋ ಎಂದು ಅತ್ತನು.

ಫ್ರ್ಯಾಂಕೊಯಿಸ್ ಮತ್ತು ಪೆರಾಲ್ಟರ ಸಂದರ್ಶನ ಅದೇ ಅವಕ್ಕೆ ಕೊನೆಯದು. ಬಕ್‌ನ ಜೀವನದಲ್ಲಿ ಮೊದಲಿನ ಇನ್ನೆಷ್ಟೊ ಜನರಂತೆ ಇವರೀರ್ವರೂ ಕಣ್ಮರೆಯಾದರು !

ಸ್ಕಾಚ್ ಮನುಷ್ಯನೊಬ್ಬ ಈ ನಾಯಿಗಳ ಪರಿವಾರವನ್ನು ತನ್ನ ವಶಕ್ಕೆ ತೆಗೆದುಕೊಂಡ. ಡಾಸನ್ನಿನ ಕಾಲುದಾರಿಗೆ ಹೊರಟ. ಪ್ರವಾಸ ಹಗುರೇನೂ ಆಗಲಿಲ್ಲ. ವೇಳೆಯ ಉಳಿತಾಯವೂ ಎನಿಸಲಿಲ್ಲ. ಪ್ರತಿದಿನ ಬೇಜಾರ ತಲೆದೋರುತ್ತಿತ್ತು. ಇದು ಮೇಲ್‌ಗಾಡಿ ಎನಿಸಿದ್ದರಿಂದ ಬಂಗಾರ ಹುಡುಕುವವರಿಗೆಲ್ಲ ದೇಶಾದ್ಯಂತ ಸುದ್ದಿ ಮುಟ್ಟಿಸುವ ಹೊಣೆ ಅದರದು.

ಇದೆಲ್ಲ ಬಕ್‌ನ ಮನಸ್ಸಿಗೆ ಬರಲಿಲ್ಲ. ಡೇವ್, ಸೊಲೆಕ್ಸರಂತೆ ಅದಾದರೂ ಕೆಲಸದಲ್ಲಿ ಮನಸ್ಸು ಹಾಕಿತು. ಅದು ಯಾಂತ್ರಿಕ ಜೀವನ. ಒಂದು ದಿನಕ್ಕೂ ಇನ್ನೊಂದು ದಿನಕ್ಕೂ ಏನೂ ವ್ಯತ್ಯಾಸ ಎನಿಸುತ್ತಿರಲಿಲ್ಲ. ದಿವಸದ ಒಂದು ನಿಶ್ಚಿತ ವೇಳೆಗೆ ಅಡಿಗೆಯವರು ಬರುತ್ತಿದ್ದರು. ಬೆಂಕಿ ಹೊತ್ತಿಸುತ್ತಿದ್ದರು. ಊಟ ನಡೆಯುತ್ತಿತ್ತು. ಕೆಲವರು ಶಿಬಿರದಲ್ಲಿದ್ದರೆ ಉಳಿದವರು ಜೀನು ಹಾಕುತ್ತಿದ್ದರು. ನಸುಕಿನ ಸೂಚನೆಯಾಗುತ್ತಿತ್ತು. ಇರುಳೆಲ್ಲ ಶಿಬಿರಕ್ಕೆ ವಿಶ್ರಾಂತಿ. ಕೆಲವರು ತಮ್ಮ ಹಾಸಿಗೆ ಸಿದ್ಧ ಮಾಡಿಕೊಳ್ಳುತ್ತಿದ್ದರು. ಹಲವರು ಅಡಿಗೆಯವರಿಗೆ ನೀರು ತಂದು ಕೊಡುತ್ತಿದ್ದರು. ನಾಯಿಗಳಿಗೂ ಆಗಲೇ ಊಟ. ಇದಾದ ಮೇಲೆ ಅಲೆದಾಡಲು ಅವಕ್ಕೆ ಅನುವು. ಕೆಲವು ನಾಯಿಗಳು ಅತಿ ಭಯಾನಕವಾಗಿದ್ದವು. ಮೂರು ಸಲ ಕಾದಾಟವಾದ ಮೇಲೆ ಅವು ಬಕ್‌ನ ಆಡಳಿತಕ್ಕೊಳಪಟ್ಟವು.

ಬೆಂಕಿಯ ಬಳಿ ಕುಳಿತು ಕಾಸಿಕೊಳ್ಳುವದೆಂದರೆ ಅದಕ್ಕೆ ಬಲು ಮೆಚ್ಚು. ಕಾಲು ಚಾಚಿ ತಲೆ ಎತ್ತಿ ಕಿಡಿಗಳ ಕಡೆಗೆ ನೋಡುತ್ತ ಅರೆನಿದ್ದೆಯಲ್ಲಿದ್ದವರಂತೆ ಕುಳಿತುಬಿಡುತ್ತಿತ್ತು. ಸೂರ್ಯಚುಂಬಿತ ಸಾಂತಾಕ್ಲೆರಾ ಕೊಳ್ಳದಲ್ಲಿಯ ನ್ಯಾಯಾಧೀಶ ಮಿಲ್ಲರರ ದೊಡ್ಡ ಮನೆಯ ನೆನಪಾಗುತ್ತಿತ್ತು ಅದಕ್ಕೆ. ಸಿಮೆಂಟಿನ ಈಜುವ ಕೆರೆ, ಕೂದಲಿಲ್ಲದ ಮೆಕ್ಸಿಕನ್ ನಾಯಿಗಳು, ಟೂಟ್ಸಿ, ಜಪಾನಿನ ಪಗ್ ನಾಯಿ—ಎಲ್ಲ ಮಾಲೆಮಾಲೆಯಾಗಿ ಕೋದು ನೆನಪಿಗೆ ಬರುತ್ತಿದ್ದವು. ಕೆಂಪು ಸ್ವೆಟರಿನ ಆ ಮನುಷ್ಯ, ಕರ್ಲಿಯ ಮರಣ, ಸ್ಪಿಟ್ಝನೊಡನೆ ಕಾದಾಟ, ತನ್ನ ಬೇಕು ಬೇಡಗಳು—ಅದರ ಲಕ್ಷ್ಯಕ್ಕೆ ಬರುತ್ತಿದ್ದವು. ಅದು ಮನೆಮೂಳವಾಗಿದ್ದಿಲ್ಲ. ಬಿಸಿಲಿನ ಪ್ರದೇಶದ ನೆನಪು ಅದಕ್ಕೆ ಮಸು

ಕಾಗಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ತಾನು ಹುಟ್ಟಿ ಬೆಳೆದ ಪ್ರದೇಶದ ನೆನಪು ಅದಕ್ಕೆ ಸ್ಫುಟವಾಗಿತ್ತು. ಹುಟ್ಟುಗುಣಗಳು ಒಮ್ಮೆ ಎದ್ದು ಕಾಣದೆ, ಹಿಂದುಗಡೆ ಅವರಲ್ಲಿ ಜಾಗೃತವಾದವು.

ಒಮ್ಮೊಮ್ಮೆ ಅದು ಕಾಲುಮಡಿಚಿಕೊಂಡು ಬೆಂಕಿಯೆಡೆಗೆ ದಿಟ್ಟಿ ಚೆಲ್ಲಿ ಕುಳಿತಾಗ ಆ ಉರಿ ಬೇರೊಂದು ಬೆಂಕಿಯದು ಎಂದು ಅನಿಸುತ್ತಿತ್ತು. ಅಡಿಗೆ ಯವನಾಗಲಿ ಬೇರೊಬ್ಬನಂತೆ ಕಾಣುತ್ತಿದ್ದ ! ಅವನದು ಅಕರಾಳ ವಿಕರಾಳ ಸ್ವರೂಪ. ಅಡಿಗೆಯವನ ಕೂದಲು ಜಡೆಗಟ್ಟಿದಂತೆ ಅನಿಸುತ್ತಿತ್ತು. ತಲೆ ಕಾಣದಂತೆ ಹಿಂದೆ ಹೋದಂತೆನಿಸುತ್ತಿತ್ತು. ಕತ್ತಲೆಯನ್ನು ನೋಡಿ ಅದು ಹೆದರಿ ಸಾಯುತ್ತಿತ್ತು. ವಿಚಿತ್ರವಾಗಿ ಒದರುತ್ತಿತ್ತು. ಮೈಮೇಲಿನ ಕೂದಲು ಜಡೆಗಟ್ಟಿ ಉಣ್ಣೆಯಂತಾಗಿದ್ದವು. ಬೆನ್ನು ಬಿಸಿಲಿನಿಂದ ಸುಟ್ಟುಹೋದಂತಾ ಗಿತ್ತು. ನೆಟ್ಟಗೆ ನಿಲ್ಲಲು ಬರತ್ತಿರಲಿಲ್ಲ. ಯಾವಾಗಲೂ ಹೆದರಿಕೆಯ ವಾತಾ ವರಣದಲ್ಲಿ ಬೆಳೆದವರಂತೆ ಚುರುಕುತನ ಅದಕ್ಕೆ ಮೈಗೂಡಿಹೋಗಿತ್ತು !

ಒಮ್ಮೊಮ್ಮೆ ಈ ಜಡೆಗಟ್ಟಿದ ಕೂದಲಿನವ ಬೆಂಕಿಯ ಬಳಿಗೆ ಬಂದು, ತಲೆಯನ್ನು ಕಾಲುಗಳ ನಡುವೆ ಹಾಕಿಕೊಂಡು ಮಲಗುತ್ತಿದ್ದ. ಇಂಥ ವೇಳೆಗೆ ಅವನ ಮೊಣಕೈ ಮೊಣಕಾಲು ಮೇಲಿರುತ್ತಿದ್ದವು. ಕೈಗಳನ್ನು ತಲೆಯ ಮೇಲೆತ್ತಿ ಮಳೆಸುರಿಸುವನೆಂಬಂತೆ ಕಾಣುತ್ತಿದ್ದ ! ಬಕ್‌ನಿಗೆ ಕತ್ತಲೆ ಯಲ್ಲಿ ಕಲ್ಲಿದ್ದಲಿಯ ಕೆಂಡ ಎರಡೆರಡಾಗಿ ಕೆಂಪಾದ ಕಣ್ಣಿನಂತೆ ಕಾಣುತ್ತಿದ್ದವು. ರಾತ್ರಿಯಲ್ಲಿ ಪ್ರಾಣಿಗಳು ಒದರುವದನ್ನೂ ಅದು ಕೇಳುತ್ತಿತ್ತು. ಇಂತಹ ವೆಲ್ಲ ವಿಚಿತ್ರ ಕನಸು ಕಂಡಾಗ ಅದರ ಮೈಗೂದಲು ನೆಟ್ಟಗಾಗುತ್ತಿದ್ದವು. ಅಷ್ಟರಲ್ಲಿ ಅಡಿಗೆಯವ—'ಏ ಬಕ್' ಎಂದು ಎಚ್ಚರಿಸುತ್ತಿದ್ದ. ಆಗ ಆ ಬೇರೊಂದು ಜಗತ್ತು ಮಾಯವಾಗಿ ನೈಜ ಪ್ರಪಂಚ ಅದರ ಕಣ್ಣು ಮುಂದೆ ಬಂದು ನಿಲ್ಲುತ್ತಿತ್ತು. ನಿದ್ರೆಯಿಂದ ಎಚ್ಚತ್ತವರಂತೆ ಅದು ಎದ್ದು ಆಗ ಮೈಮು ರಿದು ಆಕಳಿಸುತ್ತಿತ್ತು.

ಮೈಮುರಿ ದುಡಿತದ ಈ ಕಾಲುದಾರಿಯ ಮೇಲುಗಾಡಿಯ ಪ್ರವಾಸ ದಿಂದ ನಾಯಿಗಳೆಲ್ಲ ನುಗ್ಗಾದವು. ಡಾಸನ್ನಿಗೆ ಮುಟ್ಟುವಷ್ಟರಲ್ಲಿ ಎಲ್ಲ ಪ್ರಾಣಿ ಗಳ ತೂಕ ಇಳಿದಿತ್ತು. ಕನಿಷ್ಠ ಒಂದು ವಾರದ ವಿಶ್ರಾಂತಿಯಾದರೂ ಅವಕ್ಕೆ ಅವಶ್ಯವೆನಿಸಿತ್ತು. ಆದರೆ ಎರಡು ದಿನ ಆಗುವದರೊಳಗಾಗಿ ಹೊರಗೆ

ಹೋಗುವ ಕಾಗದಪತ್ರ ತೆಗೆದುಕೊಂಡು ಮತ್ತೆ ಪ್ರವಾಸಕ್ಕೆ ಅಣಿಯಾಗ ಬೇಕಾಯಿತು. ನಾಯಿಗಳು ಬಹಳ ದಣಿದಿದ್ದುವು. ವಾಹಕರು ಗುಣುಗುಟ್ಟುತ್ತಿದ್ದರು. ಸುಖಕ್ಕೆ ಸಾಲದೆಂಬಂತೆ ಪ್ರತಿದಿನ ಹಿಮಮಳೆ ಬೇರೆ. [illegible] ಕ್ರಮಿಸುವ ದಾರಿ ಕಡಿಮೆ, ಎಡರುತೊಡರುಗಳೂ ಅಸಂಖ್ಯ, ಒಯ್ಯುವ ವಸ್ತುಗಳೂ ಭಾರವಾದುವು,—ಹೀಗಿದ್ದರೂ ಹೇಗೋ ಜನರು ಪ್ರಾಣಿಗಳನ್ನು ನಡೆಯಿಸಿಕೊಂಡು ಸಾಗಿದ್ದರು.

ಪ್ರತಿ ಇರುಳು ನಾಯಿಗಳ ಯೋಗಕ್ಷೇಮ ನೋಡಲು. ಬಂದಿದ್ದ ಮಾರ್ಗದರ್ಶಕರಿಗಿಂತ ಅವುಗಳಿಗೆ ಆಹಾರ ನೀಡಲು. ನಾಯಿಗಳು [illegible] ಹೋಗುವ ಮೊದಲು ಯಾವನೂ ಹಾಸಿಗೆ ಬಿಚ್ಚುತ್ತಿರಲಿಲ್ಲ. [illegible] ಪ್ರಾಣಿಗಳು ಹಣ್ಣಾಗಿದ್ದುವು. ಚಳಿಗಾಲದ ಪ್ರಾರಂಭದಿಂದ ಎಂದರೆ ಅವು ಹದಿನೆಂಟು ನೂರು ಮೈಲು ನಡೆದಿದ್ದುವು. ಎಂಥ ನಾಯಿಗಳಿದ್ದರೂ ಜೀವ ಬಂಡೆಗಳನ್ನು ಹೀಗೆ ಎಳೆಯುವುದು ಅಸಾಧ್ಯ ಕೋಟಲೆಯದು! ಬಕ್ ಎಲ್ಲವನ್ನೂ ನಿರ್ವಹಿಸಿತು. ಶಿಸ್ತು ಕಾಪಾಡಿಕೊಂಡಿತು. ತನಗೂ ದಣಿವು ಬಸವಳಿದರೂ ಅದು ಕೇಳಲಿಲ್ಲ. ಬಿಲ್ಲಿ ಇಡಿ ರಾತ್ರಿ ಒದರುತ್ತಿತ್ತು. ಜೋ ಸಿಡುಕನಾಗಿತ್ತು. ಸೋಲಿಕ್ಸನ ಬಳಿ ಯಾರೂ ಸುಳಿಯುವಂತಿರಲಿಲ್ಲ! ಕುರುಡು ಕಣ್ಣಿನ ಕಡೆಗಾಗಲಿ ಬೇರೆಡೆಗಾಗಲಿ ಅಷ್ಟೆ!

ಎಲ್ಲಕ್ಕಿಂತ ಡೇವ್ನಿಗೆ ವ್ಯಥೆ ಹೆಚ್ಚಾಗಿತ್ತು. ಶಿಬಿರ ತಳವೂರಿದಾಗ ಅದು ಶೀಘ್ರ ಕೋಪಿಯಾಗುತ್ತಿತ್ತು. ಒಮ್ಮೆ ಜೀನು ತೆಗೆದ ಮೇಲೆ ತಿರುಗಿ ಮುಂಜಾನೆ ಹಾಕುವವರೆಗೂ ಅದಕ್ಕೆ ಕಾಲೇ ಏಳುತ್ತಿರಲಿಲ್ಲ. ಜಾರುಬಂಡಿಗೆ ಸ್ವಲ್ಪ ಧಡಕಿಯಾದರೆ ಸಾಕು ಅದು ಒದರುತ್ತಿತ್ತು. ವಾಹಕರು ಏನಾಗಿದೆ ಎಂದು ಗೊತ್ತು ಮಾಡಿಕೊಳ್ಳಲು ಹೋದರೆ ಏನೂ ಹೊಳೆಯುತ್ತಿರಲಿಲ್ಲ. ಎಲ್ಲರಿಗೂ ಡೇವ್ನ ವಿಷಯಕ್ಕೆ ವಿಶೇಷ ಆಸ್ಥೆ ಹುಟ್ಟಿತು. ಚುರುಟು ಸೇದುವ ವೇಳೆಗೆ, ಊಟಕ್ಕೆ ಕುಳಿತಾಗ ಇದೇ ವಿಚಾರ ಅವರಿಗೆ. ಅದನ್ನು ಅಗ್ಗಿಷ್ಟಿಕೆಯ ಬಳಿಗೊಯ್ದು ಉಪಚರಿಸಿದರು. ಎಲುಬಿಗೆಲ್ಲೋ ಪೆಟ್ಟು ತಗಲಿರಬೇಕು ಎಂದು ಹೊಳೆಯಿತಷ್ಟೆ!

ಕ್ಯಾಸಿಯರ್ ಬಾರಿಗೆ ಬರುವಷ್ಟರಲ್ಲಿ ದಾರಿಯಲ್ಲಿ ಹತ್ತು ಹನ್ನೆರಡು ಸಲ ಕಾಲು ತೊಡರಾಗ ಅದು ನೆಲಕ್ಕೆ ಬಿದ್ದಿತು. ಆ ನಾಯಿಯನ್ನು ಹೊರಗೆ

ತೆಗೆದು ಸೊಲೆಕ್ಸನನ್ನು ಅಲ್ಲಿಂಸಲಾಯಿತು. ಹಿಂದಿನಿಂದ ಡೇವ್ಹ ನಡೆಯುತ್ತ ಬಂದರೆ ಸಾಕೆನಿಸಿತು. ಆದರೂ ತನ್ನ ಸ್ಥಳಕ್ಕೆ ಸೊಲೆಕ್ಸ ಬಂದದ್ದನ್ನು ನೋಡಿ ಸಿಟ್ಟಿನಿಂದ ಗುರ್ರೆನ್ನಹತ್ತಿತು. ತನ್ನ ಕೆಲಸವನ್ನು ಬೇರೆಯವರಿಗೆ ಒಪ್ಪಿಸಿದ್ದ ರಿಂದ ಅದಕ್ಕೆ ಮಾನಕ್ಷತಿ ಆದಂತೆನಿಸಿತ್ತು !

ಕಾಲು ದಾರಿ ಸಾಗಿದಾಗ ಆಗೀಗ ಡೇವ್ಹ ಹೋಗಿ ಸೊಲೆಕ್ಸನಿಗೆ ಕಚ್ಚು ತ್ತಿತ್ತು. ಸರಿಸಿಬಿಡಲು ಯತ್ನಿಸುತ್ತಿತ್ತು. ವಾಹಕನು ಚಬಕದಿಂದ ಅದನ್ನು ಸರಿಸುತ್ತಿದ್ದನು. ಆದರೆ ಈ ಚಬಕದ ಧ್ವನಿಯನ್ನು ಅದೇನು ಲಕ್ಷಿಸುತ್ತಿರಲಿಲ್ಲ. ಪರಿಶ್ರಮವಾಗದೆ ಹಿಂದಿನಿಂದ ಸುಮ್ಮನೆ ಬರುತ್ತಿರಲೆಂದು ಹೀಗೆ ಮಾಡಿದರೆ ಇದರ ವರ್ತನೆ ನೋಡಿ ವಾಹಕನಿಗೆ ನಗೆಬರುತ್ತಿತ್ತು ! ಕೊನೆಗೆ ಹಿಮದ ದಾರಿ ಅತಿ ಕಠಿಣವಾಗುತ್ತ ನಡೆದಂತೆ ಒಮ್ಮೆ ಕೆಳಗೆ ಬಿದ್ದುಬಿಟ್ಟಿತು. ಬಿದ್ದೊಡನೆ ಕಾಲು ಕೀಳಲಿಲ್ಲ. ಕೊನೆಯವರೆಗೂ ಕೀಳಲಿಲ್ಲ ! ಆದರೆ ಇದ್ದ ಶಕ್ತಿಯನ್ನೆಲ್ಲ ಪ್ರಯೋಗಿಸಿ ಒಮ್ಮೆ ಸೊಲೆಕ್ಸನ ಸ್ಥಳದ ಬಳಿಗೆ ಹೋಗಿ ನಿಲ್ಲಲು ಹವಣಿಸಿತು. ಮತ್ತೆ ತಂಬಾಕು ಸೇದುತ್ತ ಪ್ರಾಣಿಗಳನ್ನು ಹುರಿದುಂಬಿಸಿದ ವಾಹಕ. ಪ್ರವಾಸ ದಲ್ಲಿ ಹುರುಳೇನೂ ಕಾಣಲಿಲ್ಲ. ಆದರೆ ಅಷ್ಟರಲ್ಲಿ ಡೇವ್ಹ ಓಡಿಬಂದು ಸೊಲೆಕ್ಸ ನನ್ನು ಸರಿಸಿ ನಿಂತಿರುವ ದೃಶ್ಯ ಎಲ್ಲರಿಗೆ ಅಚ್ಚರಿಯುಂಟುಮಾಡಿತು.

ತಾನು ಅಲ್ಲಿಯೇ ಇರತಕ್ಕದ್ದೆಂದು ಕಣ್ಣಿನಿಂದಲೆ ಒಡೆಯನಿಗೆ ಹೇಳಿ ಕೊಂಡಿತು. ಪ್ರಾಣಪರಿತ್ಯಾಗದಿಂದಲೂ ಕೂಡ ಪ್ರಾಣಿವರ್ಗ ಹೇಗೆ ಸ್ವಾಭಿ ಮಾನಕ್ಕೆ ಚ್ಯುತಿ ತಂದುಕೊಳ್ಳದು ಎಂಬ ಮಾತು ಎಲ್ಲರ ನಿದರ್ಶನಕ್ಕೆ ಈಗ ಬಂದಂತಾಯಿತು. ಏನೇ ಆಗಲಿ ಸಾಯುವ ವೇಳೆಗೆ ಸಮಾಧಾನವಿರಲೆಂದು ಯಾರೂ ಅದಕ್ಕೆ ಅಡ್ಡ ಬರಲಿಲ್ಲ. ಮತ್ತೆ ಮೊದಲಿನಂತೆ ವ್ಯವಸ್ಥಿತವಾಗಿ ಡೇವ್ಹ ನನ್ನು ಅದರ ಪ್ರೀತಿಯ ಸ್ಥಳಕ್ಕೆ ಹೂಡಿದರು. ಅಷ್ಟೆ ಅಭಿಮಾನದಿಂದ ಹಿಂದಿ ನಂತೆ ಅದು ಬಂಡಿ ಎಳೆಯತೊಡಗಿತು. ಬಂಡಿ ಸಾಗಿದಂತೆ ಕುಂಟುವದೂ ಪ್ರಾರಂಭವಾಯಿತು.

ಶಿಬಿರದ ವಿಶ್ರಾಂತಿಯ ವೇಳೆಯಲ್ಲಿ ವಾಹಕನು ಅದನ್ನು ಬೆಂಕಿಯೆಡೆಗೆ ಒಯ್ದು ಉಪಚರಿಸಿದ. ಮುಂಜಾವು ಅದಕ್ಕೆ ಪ್ರವಾಸದಲ್ಲಿ ಆಸಕ್ತಿ ಕಾಣಲಿಲ್ಲ. ಅಂಬೆಗಾಲಿಡುತ್ತ ಅದು ವಾಹಕನ ಬಳಿಗೆ ಬಂದಿತು. ಅತಿ ಪ್ರಯಾಸದಿಂದ ಕಾಲೂರಿ ನಿಂತಿತು. ತನ್ನ ಗೆಳೆಯರಿದ್ದ ಜೇನಿನ ಬಳಿಗೆ ಹೋಯಿತು. ಅದರ

ಶಕ್ತಿ ಹ್ರಾಸವಾಗಿತ್ತು. ದೀರ್ಘ ಉಸಿರು ಕರೆಯತೊಡಗಿತು. ವೇದನೆಯಿಂದ ಗೋಳಿಡಹತ್ತಿತ್ತು.

ಇಲ್ಲಿಗೆ ಮತ್ತೆ ಪಳ ನಿಲ್ಲಿಸಲಾಯಿತು. ಸ್ಕಾಚ್ ಮನುಷ್ಯನು ಶಿಬಿರ ಸ್ಥಾನಕ್ಕೆ ಹೋದನು. ಜನರ ಮಾತುಕತೆ ನಿಂತವು. ರಿವ್ಹಾಲ್ವರಿನ ಧ್ವನಿ ಬಂದಿತು. ಅವನು ತಿರುಗಿ ಜಾರುಬಂಡಿಯ ಬಳಿಗೆ ಬಂದು ಮುಂದಿನ ಪ್ರವಾಸಕ್ಕೆ ಅವಸರ ಮಾಡತೊಡಗಿದ. ಚಬಕಗಳು ಸುಂಯ್ಯೆಂದು ಸದ್ದು ಮಾಡಿದವು. ಕೊರಳ ಗೆಜ್ಜೆಗಳು ಘಿಲ್ ಘಿಲ್ ಧ್ವನಿಗೈದವು. ನದಿಯ ದಡದ ಗಿಡಗಳ ತೋಪಿನ ಹಿಂದೆ ಏನು ನಡೆಯುತ್ತೆಂಬುದು ಬಕ್ ಹಾಗೂ ಉಳಿದೆಲ್ಲ ನಾಯಿಗಳಿಗೆ ಥಟ್ಟನೆ ಹೊಳೆಯಿತು.



# ೫. ಪ್ರವಾಸದ ದಣಿವು ಹಾಗೂ ಸತ್ವಪರೀಕ್ಷೆ

ಡಾಸನ್ನಿನಿಂದ ಹೊರಟು ಮೂವತ್ತು ದಿವಸ ಪ್ರವಾಸ ಮಾಡಿದ ಬಕ್ ಹಾಗೂ ಸಂಗಡಿಗರೊಡಗೂಡಿದ ದಳ ಈಗ ಸ್ಕ್ಯಾಗ್ವೇಗೆ ಬಂದಿತು. ಎಲ್ಲ ಪ್ರಾಣಿಗಳು ಸತ್ತು ಸುಣ್ಣವಾಗಿದ್ದವು. ಬಕ್‌ನ ಹಿಂದಿನ ನೂರಾ ನಲವತ್ತು ಪೌಂಡಿನ ತೂಕವೆಲ್ಲಿ ? ಇಂದಿನ ಕೇವಲ ನೂರಾಹದಿನೈದು ಎಲ್ಲಿ ? ಉಳಿದ ನಾಯಿಗಳ ಹಾಡು ಯಾತಕ್ಕೂ ಬೇಡ. ಪೈಕ್,—ತನ್ನ ಕಳ್ಳತನದ ಜೀವನದಲ್ಲಿ—ಕಾಲು ನೋಯಿಸಿಕೊಂಡು ಈಗ ಕುಂಟುತ್ತ ಕೂರುತ್ತ ಸಾಗಿತ್ತು. ಸೊಲೆಕ್ಸ್ ಹಾಗೆಯೇ. ಡಬ್‌ನ ಹೆಗಲೆಲವು ಹೀಚಿದಂತಾಗಿತ್ತು.

ಎಲ್ಲ ನಾಯಿಗಳ ಕಾಲು ಸೋತುಹೋಗಿದ್ದವು. ಅತಿ ಉದಾಸ್ಪ್ರು. ಚಾಕಚಕ್ಯತೆ ಕನಸು ! ದಿನದ ದಣಿವಿಗೆ ಅವು ಜುಕ್ಕುಜುಲುಸೊಯ್ಯುಂದ ಕಾಲು ಹಾಕುತ್ತಿದ್ದವು. ಬಹಳ ಪರಿಶ್ರಮದ ಮೂಲಕ ಉಂಟಾದ ದಣಿವಲ್ಲವದು. ಆದರೆ ಕ್ರಮೇಣ ಕುಂದಿಗುಂದಿ ಬಲಗುಂದಿದ ದೇಹದ ನಿಃಶಕ್ತತೆ ! ಮರಳಿ ಹಾದಿಗೆ ಬರಬೇಕೆಂದರೆ ಶಕ್ತಿ ಕ್ಷಯಿಸಿತ್ತು. ಇದ್ದ ಬಿದ್ದ ಶಕ್ತಿ ಎಲ್ಲ ಕಾರ್ಯದಲ್ಲಿ ಕರಗಿಹೋಗಿತ್ತು. ನರನರ ಅಂಗಾಂಗದಲ್ಲಿ ನೋವು ! ಇದಕ್ಕೆ ಮುಖ್ಯ ಕಾರಣವೆಂದರೆ, ಸುಮಾರು ಐದು ತಿಂಗಳಲ್ಲಿ ಒಟ್ಟು ಇಪ್ಪತ್ತೈದು ನೂರು ಮೈಲು ಪ್ರವಾಸವಾದದ್ದು. ಇದು ಸಣ್ಣ ಮಾತೆ ? ಹಿಂದಿನ ಹದಿನೆಂಟು ನೂರು ಮೈಲಿನ ಯಾತ್ರೆಯಲ್ಲಿ ಐದೇ ದಿನ ವಿಶ್ರಾಂತಿ. ಸ್ಕ್ಯಾಗ್ವೇಗೆ ಬಂದಾಗ ಇನ್ನು ಮುಂದೆ ಹೆಜ್ಜೆ ಇಡುವಂತಿದ್ದಿಲ್ಲ.

ಸ್ಕ್ಯಾಗ್ವೇಯ ಭರ ಬೀದಿಗೆ ಬಂದಾಗ ‘ ಮಶ್ ಮಶ್ ’ ಎಂದು ವಾಹಕ ಪ್ರಾಣಿಗಳಿಗೆ ಉತ್ಸಾಹದುಂಬಿ ಮುಂದೆ ಸಾಗಿಸಲೆತ್ನಿಸಿದ.

‘ ಇದೆ ಚಿಕ್ಕ ಪ್ರವಾಸ. ಮುಂದೆ ನಿಮಗೆ ವಿಶ್ರಾಂತಿ ’ ಎಂದ.

ಬಂಡಿಯ ವಾಹಕರಿಗೂ ಸುಖವಿರಲಿಲ್ಲ. ಹನ್ನೆರಡು ನೂರು ಮೈಲು ಪ್ರವಾಸದಲ್ಲಿ ಅವರಿಗೆ ಎರಡೇ ದಿನದ ವಿಶ್ರಾಂತಿ. ನ್ಯಾಯವಾದ ರೀತಿಯಲ್ಲೆಂದರೆ, ಅವರಿಗೂ ಮನಸೋಕ್ತ ತಿರುಗಾಟ ಅತ್ಯವಶ್ಯವಿತ್ತು. ಆದರೆ

ಕ್ಲೋನ್‌ಡಾಯಿಕ್‌ನಲ್ಲಿ ಅಸಂಖ್ಯಾತ ಜನರು, ಬಂಧು ಬಳಗದವರೆಲ್ಲರು ಹೋಗಿದ್ದರು. ಸರಕಾರದ ಆಜ್ಞೆಗಳೂ ಹೊರಟಿದ್ದವು—ಕೆಲಸಕ್ಕೆ ಬಾರದ ನಾಯಿಗಳನ್ನು ಹಾಗೆಯೇ ಬಿಟ್ಟು ಹೊಸವನ್ನು ಉಪಯೋಗಿಸಬೇಕೆಂದು. ನಿರುಪಯೋಗಿ ನಾಯಿಗಳನ್ನು ಮಾರಲು ತಿಳಿಸಿದ್ದರು.

ಮೂರು ದಿನಗಳಾದವು. ಬಕ್ ಹಾಗೂ ಸಂಗಡಿಗರು ನಿಜಕ್ಕೂ ದಣಿದಿದ್ದವು. ನಾಲ್ಕನೆಯ ದಿನ ಮುಂಜಾವು ಸಂಸ್ಥಾನದ ಇಬ್ಬರು ಜನರು ಬಂದು, ಜೀನು, ನಾಯಿಗಳನ್ನೆಲ್ಲ ಕೊಂಡುಕೊಂಡರು. ಹಾಲ್, ಚಾರ್ಲ್‌ಸ್ ಎಂದು ಅವರ ಹೆಸರು. ಚಾರ್ಲ್‌ಸ್ ಮಧ್ಯ ವಯಸ್ಕ. ಬೂದು ಬಣ್ಣ. ಕಾಂತಿ ಹೀನ ಕಣ್ಣುಗಳುಳ್ಳವ. ಮೀಸೆ ಮೇಲಕ್ಕೆ ತಿರುವಿದ್ದ. ಹಾಲ್ ತರುಣ. ಸುಮಾರು ಹತ್ತೊಂಬತ್ತು ವರ್ಷದವ. ಪೇಟಿಯ ಚೂರಿ, ರಿವಾಲ್ವರ ಅವನ ಸೊಂಟಕ್ಕಿದ್ದವು. ಈ ನಡುಪಟ್ಟಿ ಅವನ ವೇಷಭೂಷಣದ ವೈಶಿಷ್ಟ್ಯ. ನಿರ್ದಯತನದ ದ್ಯೋತಕ!

ಆ ಮನುಷ್ಯ ಮತ್ತು ಸರಕಾರಿ ಏಜಂಟನ ನಡುವೆ ಹಣದ ವ್ಯವಹಾರ ನಡೆದದ್ದು ಬಕ್‌ನಿಗೆ ತಿಳಿಯಿತು. ಹಿಂದೆ ಪೆರಾಲ್ಟ್ ಫ್ರಾಂಕೋಯಿಸ್‌ರಂತೆ ಸ್ಕಾಚ್ ಮನುಷ್ಯ ಹಾಗೂ ಮೇಲ್ ವಾಹಕರೂ ಕಣ್ಮರೆಯಾದರು—ಬಕ್‌ನಿಂದ! ಹೊಸ ಒಡೆಯರಲ್ಲಿ ಅಂತಹ ಅಚ್ಚುಕಟ್ಟುತನ ಕಾಣಲಿಲ್ಲ. ಡೇರೆ ಅಸ್ತವ್ಯಸ್ತ ಬಿದ್ದಿದ್ದವು. ಕಪ್ಪು-ಬಸಿ, ಅಡಿಗೆಯ ಪಾತ್ರೆಗಳು ಚೊಕ್ಕಚೊರಲು ಬಿದ್ದಿದ್ದವು- ತೊಳೆಯದೆ. ಒಬ್ಬ ಮಹಿಳೆ ಸಹ ಅಲ್ಲಿದ್ದಳು.

ಹೆಸರು ಮರ್ಸಿಡೆಸ್. ಆಕೆ ಚಾರ್ಲ್‌ಸ್‌ನ ಹೆಂಡತಿ, ಹಾಲ್‌ನ ತಂಗಿ. ಒಳ್ಳೆ ಪರಿವಾರ.

ಜಾರುಬಂಡಿಯ ಮೇಲೆ ಡೇರೆಗಳನ್ನು ಒಟ್ಟುವಾಗ ಬಕ್ ಸಾಕೂತವಾಗಿ ನೋಡುತ್ತಿತ್ತು. ಸರಂಜಾಮು ಹೆಚ್ಚು ಇದ್ದರೂ ಸಿದ್ಧತೆ ಅಚ್ಚುಕಟ್ಟಾಗಿ ಕಾಣಲಿಲ್ಲ. ಡೇರೆಯನ್ನು ಅವ್ಯವಸ್ಥಿತವಾಗಿ ಸುತ್ತಿ ಒಗೆದಿದ್ದರು. ಅಲ್ಯುಮಿನಿಯಮ್ ತಾಟುಗಳನ್ನು ತೊಳೆದಿದ್ದಿಲ್ಲ ಕೂಡ! ಮರ್ಸಿಡೆಸ್ ಓರಿಯಳಂತೆ ಎಲ್ಲಕ್ಕೂ ತಾನೆ ಮುಂದುವರಿದು ಸಲಹೆ ಕೊಡುತ್ತಿದ್ದಳು. ಮುಂದೆ ಅರಿವೆಯ ಚೀಲ ಹಾಕಿದಾಗ ಹಿಂದೆ ಅದನ್ನು ಇಡಿರೆಂದು ಹೇಳಿದಳು. ಎಲ್ಲ ಕಟ್ಟಿ ಇಟ್ಟಾಗ ಇನ್ನೂ ಕೆಲವು ವಸ್ತುಗಳು ಉಳಿದದ್ದು ಕಂಡುಬಂದಿತು ಆಕೆಗೆ. ಮತ್ತೆ ಇಳಿಸಲು ಸೂಚಿಸಿದಳು.

ಬಳಿಯ ಡೇರೆಯಿಂದ ಮೂವರು ಕಣ್ಸನ್ನೆ ಮಾಡುತ್ತ ಬಂದರು.

"ಈಗ ಇದ್ದಕ್ಕಿದ್ದಂತೆ ಚೀಲಗಳು ಸರಿ ಇವೆ. ನಿಮ್ಮ ಕೆಲಸದಲ್ಲಿ ನಾನು ಅಡ್ಡ ಬರಬಾರದು, ನಿಜ. ಆದರೆ ಆ ಡೇರೆ ಮಾತ್ರ ಒಯ್ಯಬಾರದಿತ್ತು."

"ನೀವು ಹೀಗೆ ಅನ್ನುವಿರೆಂದು ಅನಿಸಿದ್ದಿಲ್ಲ" ಎಂದು ಮರ್ಸಿಡೆಸ್ ಅಚ್ಚರಿ ವ್ಯಕ್ತಗೊಳಿಸಿದಳು. "ಏನಾದರೂ ಡೇರೆ ಇಲ್ಲದೆ ಹೋಗುವದು ಅಸಾಧ್ಯ".

'ಈಗ ವಸಂತ ಋತು. ಚಳಿ ಎಲ್ಲಿಯದು ?" ಎಂದು ಒಬ್ಬ ನುಡಿದ.

ಚಾರ್ಲಸ್, ಹಾಲ್ ಇಬ್ಬರೂ ಕೂಡಿ ಮೊದಲೆ ಪರ್ವತಪ್ರಾಯವಾದ ವಸ್ತುಗಳ ಮೇಲೆ ಡೇರೆಯೊಂದನ್ನು ಇಟ್ಟರು.

"ಇಷ್ಟು ಎಳೆಯಲಿಕ್ಕಾದೀತೆ ?" ಎಂದು ಒಬ್ಬ ಕೇಳಿದ.

"ಆಗದೇನು ?" ಎಂದು ಚಾರ್ಲಸ್ ಸ್ವಲ್ಪದರಲ್ಲಿ ನುಡಿದ.

"ಏನಿಲ್ಲ. ಬಹಳ ಭಾರವಾದೀತೇನೊ !" ಎಂದು ಒಬ್ಬ ಸಂಶಯ ಮುಂದು ಮಾಡಿದ.

ಚಾರ್ಲಸ್ ಹಿಂತಿರುಗಿ ಚಬಕದ ಧ್ವನಿಗೈದ. ಇದೇನು ಸರಿ ಕಾಣಲಿಲ್ಲ.

ಒಂದು ಕೈಯಲ್ಲಿ ಉದ್ದ ಗಳ, ಮತ್ತೊಂದರಲ್ಲಿ ಚಬಕ ಹಿಡಿದು ಹಾಲ್ 'ಮಶ್' ಎಂದು ಕೂಗಿದ.

ನಾಯಿಗಳು ಹಾರಿಬಿದ್ದು ಕೆಲ ನಿಮಿಷ ಕಸುವಿನಿಂದ ಜಗ್ಗಿದವು. ಆ ಮೇಲೆ ಹಿಂತೆಗೆದವು. ಬಂಡಿಯನ್ನೆಳೆಯಲು ಅವು ಅಸಮರ್ಥವಾದವು.

"ಸೋಮಾರಿ ಪ್ರಾಣಿಗಳು ! ಎಳೆಯುವ ಮನಸ್ಸಿಲ್ಲ" ಎಂದು ಹಾಲ್ ಮತ್ತೆ ಚಬಕ ಛಟಾಯಿಸಿದ.

ಅಷ್ಟರಲ್ಲಿ ಮರ್ಸಿಡೆಸ್ ಅಡ್ಡಗಟ್ಟಿ, "ಹಾಲ್, ಹಾಗೆ ಹೊಡೆಯಬೇಡ" ಎಂದು ಚಬಕ ಕಸಿದಳು. "ನೀನು, ಹೀಗೆ ಬಡಪ್ರಾಣಿಗಳ ಗೋಳುಹೊಯ್ದು ಕೊಂಡರೆ ಒಂದು ಹೆಜ್ಜೆ ನಾನು ಇಡಲಿಕ್ಕಿಲ್ಲ" ಎಂದಳು.

"ನಿನಗೇನು ಗೊತ್ತು ? ಅವು ಅತಿ ಮುಗ್ಗಲುಗೇಡಿ ನಾಯಿಗಳು. ಕೆಲಸವಾಗಬೇಕಾದರೆ ಅವಕ್ಕೆ ಹೊಡೆಯದೆ ವಿಧಿ ಇಲ್ಲ. ಬೇಕಾದವರಿಗೆ ಕೇಳು"–ಎಂದ ತಂಗಿಗೆ.

ಮನಸಿಗೆ ವ್ಯಥೆ ಎನಿಸಿ ಮರ್ಸಿಡೆಸ್ ದಯೆದೋರೆಂದು ಬೇಡಿದಳು.

ಜನರಲ್ಲಿ ಒಬ್ಬನೆಂದ, " ಈ ಪ್ರಾಣಿ ನೀರಿನಷ್ಟು ನೀರಕ್ತವಾಗಿವೆ. ಅತಿ ದಣಿವು. ವಿಶ್ರಾಂತಿ ಅವಕ್ಕೆ ಅತ್ಯವಶ್ಯ."

ವಿಶ್ರಾಂತಿಯ ಪ್ರಶ್ನೆ ಎತ್ತಬೇಕೂಡದೆಂದು ಶಪಥಗೈದ ಹಾಲ್.

ತನ್ನ ಅಣ್ಣನನ್ನು ಕುರಿತೇ ಮತ್ತೆ ಆಕೆ ಹೇಳಿದಳು, " ನಾಯಿಗಳು ನಿನ್ನ ಕೈಯ್ಯಲ್ಲಿವೆ. ತಿಳಿದಷ್ಟು ಮಾಡು ".

ನಾಯಿಗಳಿಗೆ ಚಬುಕದ ಏಟು ಬಿತ್ತು. ಹಿಮದಲ್ಲಿ ಕಾಲೂರಿ ನಿಂತು ಬಿಟ್ಟವು. ಹಿಮದಲ್ಲಿಯೇ ತಮ್ಮೆಲ್ಲ ಶಕ್ತಿ ಹಾಕಿದವು. ಬಂಡಿ ಚಲಿಸದಾಯಿತು. ಬಹಳ ಹೊತ್ತು ಪರಿಶ್ರಮಪಟ್ಟಾಗ ತೇಕುತ್ತ ಅವು ಎದ್ದು ನಿಂತವು. ಚಬುಕ ಸುಯ್ಯೆಂದು ಅವುಗಳ ಮೇಲೆ ಶಬ್ದಗೈಯ್ಯುತ್ತಿತ್ತು. ಮರ್ಸಿಡೆಸ್ ನಡುವೆ ಬಂದಳು. ಬಕ್‌ನ ಮುಂದೆ ಮೊಳಕಾಲೂರಿ ಅವನ ಕೊರಳಿಗೆ ಕೈ ಹಾಕಿದಳು. ಕಣ್ಣಲ್ಲಿ ನೀರು ಸುರಿಯುತ್ತಿತ್ತು.

" ಸುಮ್ಮನೆ ಎಳೆಯಬಾರದೆ ? ಚಬುಕದ ಏಟು ತಪ್ಪುವುದು " ಎಂದು ಪೂರ್ಣ ಸಹಾನುಭೂತಿಯಿಂದ ಹೇಳಿದಳು. ಬಕ್‌ನಿಗೆ ಆಕೆ ಸರಿಬೀಳಲಿಲ್ಲ.

ನೋಡುತ್ತ ನಿಂತವರಲ್ಲಿ ಒಬ್ಬ ಹಲ್ಲುಕಡಿದು ಹೇಳಿದ, " ನಿಮ್ಮ ಪ್ರವಾಸ ಹಾಳಾಗಲಿ. ನಾಯಿಗಳ ಗತಿ ಏನು ? ಹಿಮ ಬಹಳ ಬಿರುಸಾಗಿದೆ. ಎಡಬಲಕ್ಕೆ ಕೋಲು ಹಾಕಿ ಅದನ್ನೊಡೆಯಿರಿ."

ಈ ಸಲಹೆಯಂತೆ ಮೂರನೆ ಯತ್ನ ನಡೆಯಿತು. ಹಾಲ್ ಕೋಲಿನಿಂದ ಹಿಮರಾಶಿ ಒಡೆಯತೊಡಗಿದ. ಅತಿ ಭಾರವಾದ ಬಂಡಿ ಸ್ವಲ್ಪ ಮುಂದೆ ಸರಿಯಿತು. ಬಕ್ ಹಾಗೂ ಸಂಗಡಿಗರು ಹೊಡೆತಕ್ಕೆ ನುಗ್ಗಾಗಿದ್ದವು. ಮುಂದಿನ ನೂರು ಯಾರ್ಡು ಇಳಿಜಾರಾಗಿತ್ತು. ಅತಿ ಅನುಭವಿಕ ಮನುಷ್ಯನಿದ್ದರೆ ಮಾತ್ರ ಈ ಪ್ರವಾಸ ಸುಗಮವಾಗಬಹುದಾಗಿತ್ತು. ಆದರೆ ಹಾಲ್ ಹೊಸಬ. ಬಂಡಿ ಮೆಲ್ಲನೆ ಸಾಗಿದಾಗ ಅರ್ಧ ಸಾಮಾನುಗಳು ಕೆಳಗೆ ಉರುಳಿದವು. ನಾಯಿಗಳು ನಿಲ್ಲಲೇ ಇಲ್ಲ. ಹಗುರಾದ ಬಂಡಿ ಈಗ ವೇಗವಾಗಿ ಮುನ್ನುಗ್ಗಿತು. ಕಂಡಂತೆ ಸಾಮಾನು ಹೇರಿದ್ದಕ್ಕಾಗಿ, ಕೆಟ್ಟ ರೀತಿಯಿಂದ ನಡೆಸಿಕೊಂಡದ್ದಕ್ಕಾಗಿ ಅವುಗಳಿಗೆ ಸಿಟ್ಟು ಹತ್ತಿತ್ತು. ಬಕ್ ಜೆಂಕಿಯಾಗಿತ್ತು. ಅದು ಓಟ ಕೊಟ್ಟಿತು. ಉಳಿದವೂ ಅನುಸರಿಸಿದವು. ಹೊ ಹೊ ಎಂದು ಎಷ್ಟು ಕೂಗಿದರೂ ಅವು ಲಕ್ಷಿಸಲಿಲ್ಲ. ಅವನ ಧ್ವನಿಯೂ ಹೋಯಿತು. ಬುಡಮೇಲಾದ

ಬಂಡಿ ಅವನನ್ನೂ ಉರುಳಿಸಿತು. ನಾಯಿಗಳು ಬೀದಿಗೆ ಬಂದವು. ಸ್ಕ್ಯಾಗ್ವೇಗೆ ರಂಗು ಏರಿತು.

ದಯಾಳು ನಾಗರಿಕರು ಎಲ್ಲ ವಸ್ತುಗಳನ್ನು ಒಟ್ಟುಗೂಡಿಸಿಕೊಟ್ಟರು. ತಮ್ಮ ಸಲಹೆಗಳನ್ನೂ ಇತ್ತರು. ಭಾರ ಅರ್ಧಕ್ಕರ್ಧ ಕಡಿಮೆಯಾಗಿ, ಇನ್ನೂ ಎರಡರಷ್ಟು ನಾಯಿ ಹೆಚ್ಚಿದರೆ ಡಾಸನ್ ಮುಟ್ಟುವ ಆಸೆ ಎಂದು ಅವರು ಹೇಳಿದರು. ಮೂವರೂ ಮನಸ್ಸಿಲ್ಲದೆ ಕೇಳಿದರು. ಡೇರೆ ಹೊಡೆದರು. ಡಬ್ಬಿಗಳನ್ನು ತೆಗೆತೆಗೆದು ಇಟ್ಟಾಗ ಜನರು ನಗಹತ್ತಿದರು. ಕಂಬಳಿಗಳು ಈಗಿದ್ದುದರ ಅರ್ಧದಷ್ಟಾಗಿದ್ದರೂ ಹೆಚ್ಚೆಂದು ಅವರು ಅಂದರು. “ ಅಡಿಗೆಯ ಪಾತ್ರೆ, ತಾಟು ದೂರೆಸೆಯಿರಿ. ಇದು ಹಿಮಪ್ರದೇಶದ ಪ್ರವಾಸಿಕರ ಲಕ್ಷಣವೆ ? ” ಎಂದು ಕೇಳಿದರು ಒಬ್ಬಿಬ್ಬರು.

ಬೇಡಾದ ವಸ್ತುಗಳನ್ನು ಚೆಲ್ಲಿಕೊಟ್ಟು ದಳ ಮುಂದೆ ಅಡಿ ಇಟ್ಟಿತು. ಒಂದರ ತರುವಾಯ ಒಂದು ತನ್ನ ಪಾತ್ರೆ ಒಗೆದಾಗ, ಅರಿವೆ ಒಪ್ಪೆಯಾದಾಗ ಮರ್ಸೆಡೆಸ್ ದೂರಿದಳು. ವಿಧವಿಧವಾಗಿ ತಿರಸ್ಕಾರ ವ್ಯಕ್ತಗೊಳಿಸಿದಳು. ಎದೆಯೊಡೆದುಕೊಂಡವರಂತೆ ಕೈ ಚೆಲ್ಲಿ ಕುಳಿತಳು. ಇಂತಹ ಎಷ್ಟೊ ಚಾರ್ಲ ಸರು ಬಂದರೂ ಒಂದು ಅಂಗುಲು ಸರಿಯೆನೆಂದಳು ಆಕೆ. ಕಣ್ಣೀರಿಟ್ಟು ಆಕೆ ದೂರೆಸೆದ ವಸ್ತುಗಳನ್ನೆ ನೋಡುತ್ತಿದ್ದಳು. ಎಲ್ಲರಿಗೂ ಅವುಗಳಿಗಾಗಿ ಬೇಡಿ ಕೊಂಡಳು. ನಿರುಪಾಯಳಾದರೂ ಸಿಟ್ಟುಸಿಟ್ಟು ಹಾಯುವದು ತಪ್ಪಲಿಲ್ಲ.

ಅರ್ಧದಷ್ಟು ಭಾರ ಹೋಗಿದ್ದರೂ ನಾಯಿಗಳಿಗೆ ಬಂಡಿ ಜಗ್ಗುವದು ದುಃಸ್ಸಾಧ್ಯವಾಗಿತ್ತು. ಚಾರ್ಲಸ್ ಮತ್ತು ಹಾಲ್ ಸಂಜೆಗೆ ಹೋಗಿ ಬೇರೆ ಆರು ನಾಯಿ ತಂದರು. ಒಟ್ಟು ಹದಿನಾಲ್ಕು ನಾಯಿಗಳಾದವು. ಹೊರಗಿನಿಂದ ಬಂದ ನಾಯಿಗಳ ಉಪಯೋಗ ಅಷ್ಟಾಗಲಿಲ್ಲ. ಮೂರು ಸಣ್ಣ ಕೂದಲಿನವು. ಒಂದು ನ್ಯೂ ಫೌಂಡಲಂಡದ್ದು. ಬೇರೆ ಎರಡರ ಜಾತಿ ತಿಳಿಯದು. ಹೊಸ ಪ್ರಾಣಿಗಳಿಗೆ ಏನೂ ತಿಳಿಯದು. ಬಕ್ ಹಾಗೂ ಸಂಗಡಿಗರು ಇವನ್ನು ತಿರಸ್ಕಾರದಿಂದ ಕಾಣುತ್ತಿದ್ದವು. ಏನು ಮಾಡಬಾರದೆಂಬದನ್ನು ಅವಕ್ಕೆ ಅವು ಕಲಿಸಿದರೂ ಮಾಡುವದನ್ನು ಹೇಳಿಕೊಡಲಿಲ್ಲ ! ಮಾಂಗ್ರಿಲ್ ನಾಯಿಗಳನ್ನು ಹೊರತುಪಡಿಸಿ ಉಳಿದ ಹೊಸವು ದಿಙ್ಮೂಢವಾದವು. ಅನಾಗರಿಕ ರೀತಿ

ಯಿಂದ ನಡೆಸಿಕೊಳ್ಳುವ ವಿಧಾನ ಅವಕ್ಕೆ ಸರಿಬೀಳಲಿಲ್ಲ. ನಿರುತ್ಸಾಹಿಯಾದವು. ಗಟ್ಟಿ ಭಾಗವೆಂದರೆ ವೈ ಎಲುವೇ ಅವಕ್ಕೆ !

ಅಸಹಾಯ್ಯ ಅನಾಥ ಹೊಸನಾಯಿಗಳ ಹಾಗೂ ಇಪ್ಪತ್ತೈದು ನೂರು ವೈಲು ಒಂದೆ ಸವನೆ ನಡೆದ ಹಳೆನಾಯಿಗಳ ಒಟ್ಟು ತಂಡದಿಂದ ಕೆಲಸವಾಗು ವಂತಿರಲಿಲ್ಲ. ಇಬ್ಬರು ಜನರು ಮಾತ್ರ ಅತಿ ಹುರುಪಿನವರಿದ್ದರು. ಅಭಿಮಾನವೂ ತುಂಬಿತ್ತು. ಹದಿನಾಲ್ಕು ನಾಯಿಗಳಿಂದ ವಿಶಿಷ್ಟರೀತಿಯಲ್ಲಿ ಸಾಗಿದ್ದರು. ಎಷ್ಟೊ ಬಂಡಿಗಳು ಡಾಸನ್ನಿಗೆ ಹೊರಟಿದ್ದವು. ಕೆಲವು ಮರಳಿದ್ದವು. ಆದರೆ ಇದೊಂದೆ ಹದಿನಾಲ್ಕು ನಾಯಿಗಳ ದಳ. ಮುಖ್ಯವಾಗಿ ಉತ್ತರ ಧ್ರುವ ಯಾತ್ರೆಯಲ್ಲಿ ಬಂಡಿಗೆ ಹದಿನಾಲ್ಕು ನಾಯಿಗಳನ್ನು ಹೂಡುವ ಪರಿಪಾಠವಿರಲಿಲ್ಲ. ಯಾಕಂದರೆ ಅಷ್ಟು ಆಹಾರ ಪೂರೈಸುವದೇ ಕಠಿಣ. ಪಾಪ ! ಚಾರ್ಲಸ್ ಹಾಲ್‌ರಿಗೆ ಇದೆಲ್ಲ ಏನು ಗೊತ್ತು ? ಪೆನ್ಸಿಲ್ಲಿನಿಂದ ಕಾಗದದ ಮೇಲೆ ನಕಾಶ ತೆಗೆದು ಪ್ರವಾಸ ಕೈಕೊಂಡವರವರು. ಮರ್ಸಿಡೆಸ್‌ಳ ಅನುಭವವೂ ಅಷ್ಟಕ್ಕಷ್ಟೆ. ವ್ಯಾವಹಾರಿಕ ತೊಂದರೆ ಗೋಚರಿಸಲೇ ಇಲ್ಲ ಅವರಿಗೆ.

ಮರುದಿನ ತಡವಾಗಿ ಬಕ್ ನಾಯಿಗಳ ಸಾಲಿಗೆ ಒಡೆಯನಾಗಿ ಓಣಿಯು ಲ್ಲೆಲ್ಲ ಬಂಡಿ ಎಳೆಯಿತು. ಯಾತರಲ್ಲಿಯೂ ಉತ್ಸಾಹವಿಲ್ಲ. ಹೊರಟಾಗಲೇ ದಣಿವು ! ಸಾಲ್ಟ ವಾಟರ್–ಡಾಸನ್ನಿನ ನಡುವಿನ ನಾಲ್ಕರಷ್ಟು ಅಂತರ ಅದು ಕ್ರಮಿಸಿ ಬೇಸತ್ತಿತ್ತು. ಕೆಲಸದಲ್ಲಿ ಅದಕ್ಕೆ ಮನಸ್ಸೇ ಆಗಲಿಲ್ಲ. ಯಾವ ನಾಯಿಗೂ ಆಸ್ಥೆ ಹುಟ್ಟಲಿಲ್ಲ. ಹೊರಗಿನಿಂದ ಬಂದ ನಾಯಿಗಳು ಅಂಜು ಬುರುಕ. ಒಳಗಿನವುಗಳಿಗೆ ಒಡೆಯರಲ್ಲಿ ಶ್ರದ್ಧೆಯ ಲವಲೇಶವಿಲ್ಲ.

ಈ ಇಬ್ಬರು ಗಂಡಸರು, ಒಬ್ಬ ಹೆಣ್ಣುಮಗಳ ಮೇಲೆ ಅವಲಂಬಿಸುವದ ರಲ್ಲಿ ಬಕ್‌ನಿಗೆ ಏನೂ ಅರ್ಥ ಕಾಣಲಿಲ್ಲ. ಏನು ಮಾಡುವದೂ ಅವರಿಗೆ ತಿಳಿ ಯುತ್ತಿರಲಿಲ್ಲ. ಶಿಸ್ತಿನ, ಕ್ರಮದ ಸೋಂಕೇ ಇರಲಿಲ್ಲ ಅವರಿಗೆ. ಒಂದು ಶಿಬಿರ ಮುಚ್ಚಲೂ ಅರ್ಧತಾಸು, ಪ್ರಾರಂಭಿಸಲೂ ಅರ್ಧತಾಸು. ಉಳಿದ ದಿವಸವೆಲ್ಲ ವಸ್ತುಗಳನ್ನು ಹೊಂದಿಸುವಲ್ಲಿ ಕಳೆಯುತ್ತಿತ್ತು. ಒಂದೊಂದು ದಿನ ಹತ್ತು ವೈಲು ಪ್ರವಾಸವಾಗುತ್ತಿತ್ತು. ಕೆಲವು ದಿನ ಅವರು ಹೊರಡುತ್ತಿರಲೇ ಇಲ್ಲ.

ಗಂಡ, ಮತ್ತು ಅಣ್ಣನಿಂದ ಪುರಸ್ಕಾರ ಸಿಗಲಿಲ್ಲ. ಅಸಹಾಯ್ಯಕತೆಯಲ್ಲಿರು ವದು ಆಕೆಗೆ ರೂಢಿ. ಅವರು ದೂರುತ್ತಿದ್ದರು. ಸ್ತ್ರೀ ಜಾತಿಯ ಹಕ್ಕು ಬಾಧ್ಯತೆ ಗಳಿಗೆ ಮುಗಿಬಿದ್ದು ಆಕೆ ಅವರನ್ನು ಗೋಳಿಗೀಡುಮಾಡುತ್ತಿದ್ದಳು. ಮರ್ಸಿಡೆಸ್ ಈಗ ನಾಯಿಗಳ ತಂಟೆಗೆ ಹೋಗಲಿಲ್ಲ. ಅತಿ ಬೇಸರವಾದ್ದರಿಂದ ಬಂಡಿ ಯನ್ನೇ ಏರಿದಳು. ಆಕೆ ಸುಂದರಿ, ಕರುಣೆಯುಳ್ಳವಳು. ಆದರೆ ತೂಕ ನೂರಾ ಇಪ್ಪತ್ತು ಪೌಂಡು ! ನಾಯಿಗಳೊ ? ಒಂದು ಹೊರ ಹಾಕಿದರೆ ಮುಂದೆ ಕಾಲಿಡದಂತಾಗಿದ್ದವು. ಅಂತಹ ಹಸಿವೆ ! ಎಷ್ಟೋ ದಿನ ಆಕೆ ಬಂಡಿ ಯೇರಿಯೇ ಪ್ರವಾಸ ಮಾಡಿದಳು. ಆದರೆ ಮುಂದೆ ಬಂಡಿ ಸಾಗದಾಯಿತು. ಚಾರ್ಲಸ್, ಹಾಲ್ ನಾನಾ ಬಗೆಯಾಗಿ ಬೇಡಿಕೊಂಡರು. ಆದರೆ ನಿಮ್ಮದೆಲ್ಲ ಪಶುವೃತ್ತಿ ಎಂದು ಆಕೆ ಶರಾ ಹಾಕಿ ಸವಾರಿ ಮಾಡಿದಳು.

ಒಮ್ಮೆಯಂತೂ ಅವರಿಬ್ಬರೂ ಕೂಡಿ ಆಕೆಯನ್ನು ಅನಾಮತ್ತಾಗಿ ಎತ್ತಿ ಬಂಡಿಯಿಂದ ಕೆಳಗಿಳಿಸಿದರು. ಆಕೆ ಅಚ್ಚಿಯ ಸಣ್ಣ ಮಕ್ಕಳಂತೆ ಗಾಳಿಯಲ್ಲಿ ಕಾಲುಚೆಲ್ಲಾಡುತ್ತ ದಾರಿಯ ಬದಿಗೆ ಹೋಗಿ ಕುಳಿತಳು. ಹೀಗೆ ದಾರಿ ಸಾಗಿತು. ಆದರೆ ಮೂರು ಮೈಲು ಹೋದೊಡನೆ ಬಂಡಿ ತೆರವು ಮಾಡಿ ಮತ್ತೆ ಆಕೆಯನ್ನು ಹೇರಿಕೊಂಡು ಹೋದರು.

ತಮ್ಮ ಚಿಂತನೆಯಲ್ಲಿಯೆ ಅವರು ನಾಯಿಗಳನ್ನು ಲೆಕ್ಕಿಸಲಿಲ್ಲ. ಮನಸ್ಸು ಬುದ್ಧಿ ದೇಹ ಕಲ್ಲಾಗಬೇಕೆಂದು ಹಾಲ್‌ನ ಸಿದ್ಧಾಂತ. ತನ್ನ ಬೀಗ ಹಾಗೂ ತಂಗಿಗೆ ಅವನು ಇದನ್ನೇ ಶ್ರದ್ಧೆಯಿಂದ ನಿತ್ಯ ಬೋಧಿಸುತ್ತಿದ್ದ. ತನ್ನ ಸಿದ್ಧಾಂತಕ್ಕೆ ಮರ್ಯಾದೆ ಸಲ್ಲದಾದಾಗ ಟೊಣಪೆಯಿಂದ ಹೊಡೆದು ನಾಯಿಗಳ ಮೇಲೆ ಸೇಡು ತೀರಿಸುತ್ತಿದ್ದ. ಫಾಯಿವ್ಹ್ ಫಿಂಗರ್‍ಸಿಗೆ ಬಂದಾಗ ನಾಯಿಗಳ ಆಹಾರ ಪರಿಸಮಾಪ್ತವಾಯಿತು. ದಾರಿಯಲ್ಲಿ ತೊಗಲು ದೊರೆಯಿತು. ಅದು ಆರು ತಿಂಗಳ ಹಿಂದೆ ದನಗಾಹಿಗಳು ಕುದುರೆ ಕೊಂದು ಚೆಲ್ಲಿದ್ದು. ಹೆಪ್ಪುಗಟ್ಟಿದ ಹವೆ ಯಲ್ಲಿ ಅದು ಕಬ್ಬಿಣದಷ್ಟು ಬಿರುಸಾಗಿದ್ದಿತು. ಅದನ್ನೇ ನಾಯಿಗಳು ಹೊಟ್ಟೆ ಕಿಚ್ಚಿನಿಂದ ಹೊಟ್ಟೆಯಲ್ಲಿ ಹಾಕಿಕೊಳ್ಳಬೇಕಾಯಿತು. ಮಾಡುವದೇನು ? ದಕ್ಕಲಿ ಬಿಡಲಿ ಕೇಳುವವರಾರು ?

ಬಕ್ ದೆವ್ವ ಬಡಿದವರಂತೆ ದಳದ ಮುಂದಾಳಾಗಿ ಸಾಗಿತ್ತು. ಸಾಧ್ಯ ವಾದಾಗ ಎಳೆಯುತ್ತಿತ್ತು. ಆಗದೆನಿಸಿದರೆ ಜಪ್ಪೆಂದರೂ ಏಳುತ್ತಿರಲಿಲ್ಲ. ಅತಿ

ಹೊಡೆತ ಬಿದ್ದಾಗ ಚೇತರಿಸಿ ನಿಲ್ಲುತ್ತಿತ್ತು. ಅವರ ದೇಹದ ಕಾಂತಿ, ನೈಗೂದ ಲಿನ ಸೊಬಗು ಈಗೆಲ್ಲಿ ? ಕೂದಲೂ ನಿಶ್ಚೇಷ್ಟಿತವಾಗಿದ್ದವು. ಶಕ್ತಿ ಕಡಿಮೆ ಯಾಗಿತ್ತು. ಹಾಲ್‌ನ ಟೊಣಪೆಗೆ ನೈ ನುಗ್ಗಾಗಿತ್ತು. ನರಗಳು ಕೂದಲಷ್ಟು ತೆಳ್ಳಗಾಗಿದ್ದವು. ಮಾಂಸ ಇಲ್ಲದಂತಾಗಿತ್ತು. ಅಂತೇ ಎಲ್ಲ ಎಲವು ಎಣಿಸಲಿಕ್ಕೆ ಬರುವಂತಾಗಿದ್ದವು. ದೃಶ್ಯ ಹೃದಯದ್ರಾವಕವಾಗಿತ್ತು. ಆದರೆ ಬಕ್ ಎದೆ ಯೊಡೆದುಕೊಳ್ಳಲಿಲ್ಲ ! ಕೆಂಪು ಸ್ವೆಟರಿನ ಮನುಷ್ಯ ಅದಕ್ಕೆ ಯೋಗ್ಯ ' ತರ ಬೇತು ' ಕೊಡಿಸಿದ್ದ.

ಬಕ್‌ನ ಗತಿ ಬೇರೆ ನಾಯಿಗಳಿಗೂ ಆಗಿತ್ತು. ಅಸ್ಥಿಪಂಜರಗಳಾಗಿದ್ದವವು. ಅವನ್ನು ಹಿಡಿದು ಒಟ್ಟು ಏಳು ನಾಯಿ. ತಮ್ಮ ದುಃಖದ ಆವೇಗದಲ್ಲಿ ಒಡೆ ಯನ ಗದಾಪ್ರಹಾರದ ದರಕಾರವೂ ಅವಕ್ಕುಳಿದಿರಲಿಲ್ಲ. ಏನೊ ದೂರಿನ ವಸ್ತು ನೋಡಿದಾಗ, ಕೇಳಿದಾಗ ಆಗುವ ಪರಿಣಾಮ ಅವರಿಂದಾಗುತ್ತಿತ್ತು. ಆರೆ ಜೀವವಷ್ಟೆ ಏಕೆ ? ಕಾಲು ಜೀವ ಅಲ್ಲಿ ಉಳಿದಿತ್ತು ! ಎಲುವಿನ ಹಲವಾರು ಚೀಲಗಳವು—ಎಂದು ಭಾಸವಾಗುತ್ತಿತ್ತು. ನಿಲ್ಲಲು ಸನ್ನೆ ಮಾಡಿದರೆ ತಟಸ್ಥ ವಾಗಿ ಸತ್ತಂತೆ ನಿಲ್ಲುತ್ತಿದ್ದವು. ಹೊಡೆದಾಗ ಸ್ವಲ್ಪ ಹಿಂದು ಮುಂದಾಗುತ್ತಿ ದ್ದವು.

ಒಂದು ದಿನ ಸುಸ್ವಭಾವಿ ಬಿಲ್ಲಿ ನೆಲಕ್ಕೆ ಬಿದ್ದಿತು: ಏಳಲಿಲ್ಲ. ರೂಢಿ ಯಂತೆ ಹಾಲ್ ಚಪ್ಪಗೊಡಲಿಯಿಂದ ಅದರ ತಲೆ ಕತ್ತರಿಸಿ, ಶರೀರ ಬದಿಗೆ ಚೆಲ್ಲಿ ಹೊರಟ. ಬಕ್ ಇದನ್ನು ನೋಡಿತು. ಸಹವಾಸಿಗಳು ನೋಡಿದವು. ತಮ್ಮ ಗತಿ ಸಹ ಹೀಗೆ ಒಂದು ದಿನ ಆಗುವದೆಂದು ತಿಳಿದವು. ಮರುದಿನ ಕೂನಾನ ಕೊನೆಯಾಯಿತು. ಐದು ಉಳಿದವು. ಜೊ ದುಷ್ಟವಾಗಿತ್ತು. ಪೈಕ್ ಕುಂಟ. ಅರ್ಧ ಎಚ್ಚರಿದ್ದು ಕುಂಟುತ್ತ ನಡೆದಿತ್ತು. ಸೊಲೆಕ್ಸ, ಒಕ್ಕಣ್ಣ ನಾಯಿ ಹಾಗೂ ಹೀಗೂ ಸಾಗಿತ್ತು—ಉಳಿದುಳಿದ ಶಕ್ತಿಯಿಂದ. ಟೀಕ ಅತಿಶಯ ನುಗ್ಗಾ ಗಿತ್ತು ಹೊಡೆತಕ್ಕೆ. ಬಕ್‌ನೂ ಮೊದಲಿನಂತೆ ಶಿಸ್ತಿನ ಪರಿಪಾಲಕನಾಗಿ ಉಳಿಯ ಲಿಲ್ಲ. ಅಶಕ್ತತೆಯಿಂದ ಕುರುಡುತನ ಬಂದಿತ್ತು. ಹೇಗೊ ಕಾಲು ನೆಲಕ್ಕೆ ಹತ್ತುತ್ತಿದ್ದವು.

ಹವಾಮಾನ ಆಲ್ಹಾದಕರವಾಗಿತ್ತು. ನಾಯಿಗಳಿಗಾಗಲಿ ಜನರಿಗಾಗಲಿ ಇದು ಲಕ್ಷ್ಯಕ್ಕೆ ಬಂದಂತೆ ತೋರಲಿಲ್ಲ. ಪ್ರತಿದಿನ ಸೂರ್ಯನು ನಸು ತೀವ್ರವೇ

ಉದಿಸಿ ತಡವಾಗಿ ಅಸ್ತಂಗತನಾಗುತ್ತಿದ್ದನು. ಮುಂಜಾವು ಮೂರಕ್ಕೇ ನಸುಕು ಹರಿಯುತ್ತಿತ್ತು. ಹೊ ಬಿಸಿಲು ಇರುಳು ಒಂಬತ್ತರ ವರೆಗೆ ಹಾಗೇ ಇರುತ್ತಿತ್ತು. ಇಡೀ ದಿನ ಪ್ರಖರ ಬಿಸಿಲು. ಹಿಂದಿನ ಪೈಶಾಚಿಕ ಚಳಿಗಾಲಕ್ಕೆ ಈಗ ಉಳಿಗಾಲವಿರಲಿಲ್ಲ. ವೈಭವಶಾಲಿ ವಸಂತ ಋತುವಿನ ಚೈತನ್ಯ ಇದೀಗ ಅಡಿ ಇಡುವದರಲ್ಲಿತ್ತು. ಭೂಪ್ರದೇಶದಿಂದೆಲ್ಲ ಈ ನಿನಾದ ಹೊರಹೊಮ್ಮಹತ್ತಿತ್ತು. ಉನ್ಮಾದವು ಎಲ್ಲೆಡೆ ಹೊರಸೂಸತೊಡಗಿತು. ಸ್ಥಾವರ ಜಂಗಮ ವಸ್ತುಗಳಿಂದೆಲ್ಲ ಅದು ಪ್ರವಹಿಸುವಂತೆ ತೋರಿತು. ಮಂಜಿನ ವಾತಾವರಣದಲ್ಲಿ ಸತ್ತಂತಾಗಿದ್ದ ವಸ್ತುಗಳಲ್ಲಿ ಈಗ ಅಪೂರ್ವ ಸ್ಫುರಣೆ ಕಂಡುಬಂದಿತು. ಪೈನ ಗಿಡಗಳು ಚಿಗುರೆಲೆ ಬಿಡಹತ್ತಿದವು. ವಿಲೊ ಹಾಗೂ ಆ್ಯಸ್ಪೆನ್ ಗಿಡಗಳಲ್ಲಿ ಮೊಗ್ಗೆಗಳು ಒಡೆದವು. ಗಿಡಗಂಟೆಗಳು ಹಚ್ಚಹಸಿರು ಸೂರಿಯಹತ್ತಿದವು. ಇರುಳೆಲ್ಲ ಕ್ರಿಕೆಟ್ ಪಕ್ಷಿಗಳ ಧ್ವನಿ. ಹಗಲು ಅಂಬೆಗಾಲಿಡುವ, ಸರಿದಾಡುವ ಪ್ರಾಣಿ, ಕ್ರಿಮಿ ಕೀಟಕಗಳ ಚಟುವಟಿಕೆ. ಇಣಚಿಗಳ ಸಮ್ಮಿಶ್ರ ಧ್ವನಿ, ಪಕ್ಷಿಗಳ ಇಂಚರ, ದಕ್ಷಿಣದಿಂದ ಹೊರಟು ಗಿಡಗಂಟೆಗಳಲ್ಲಿ ಹಾಯ್ದು ವಾತಾವರಣವನ್ನೆಲ್ಲ ಭೇದಿಸಿಬಿಡುತ್ತಿದ್ದವು.

ಪ್ರತಿ ಗುಡ್ಡದ ಇಳುಕಲಿನಿಂದ ನೀರಿನ ಚಿಕ್ಕ ಚಿಕ್ಕ ತಡಸಲು ಹೊರಟಿದ್ದವು. ಕಣ್ಣಿಗೆ ಕಾಣದಿದ್ದ ಕಾರಂಜಿಗಳ ಮಂಜುಳ ರವ ಬೇರೆ. ಎಲ್ಲ ವಸ್ತುಗಳಲ್ಲಿ ನೈಮಣಿತ. ಗಿಡಗಳು ವಿಶೇಷವಾಗಿ ಬೇರುಬಿಟ್ಟು ಹಿಮವನ್ನು ಸರಿಸುತ್ತಿದ್ದವು. ಸೂರ್ಯನು ಮೇಲಿಂದ ಹಿಮವನ್ನು ತಿನ್ನುತ್ತಿದ್ದರೆ ಕೆಳಗಿನಿಂದ ವನಸ್ಪತಿಗಳು. ಹಿಮವು ಆಗೀಗ ಕರಗಿ ಕರಣೆ–ಕರಣೆಯಾಗಿ ಹರಿಯುವ ನೀರಿನಲ್ಲಿ ಕೂಡುತ್ತಿದ್ದಿತು. ಇಂಥ ಚೈತನ್ಯದ ಅವರಾವತಾರವೆನಿಸಿದ ಪ್ರದೇಶದಲ್ಲಿ,—ಎಲ್ಲೆಡೆ ಬಿಸಿಲು ಹೊಡೆಯುತ್ತಿರಲು ತಂಪುಗಾಳಿ ತೀಡುತ್ತಿರಲು, ಇಬ್ಬರು ಪುರುಷರು ಸಾವಿನ ದವಡೆಯಲ್ಲಿ ಸಿಕ್ಕಿದ್ದರು. ಜತೆಗೆ ಸ್ತ್ರೀಯೊಬ್ಬಳು ಬೇರೆ; ಸಹಾಯಕವಾದ ಹಸ್ಕಿ ನಾಯಿಗಳಂತೂ ಸರಿಯೆ.

ನಾಯಿಗಳು ಹತಾಶವಾದಾಗ ಮರ್ಸಿಡೆಸ್ ಕಣ್ಣೀರಿಟ್ಟಳು. ಹಾಲ್ ಶಪಥಗೈದ. ಚಾರ್ಲಸನಿಗೂ ದುಃಖ ಉಮ್ಮಳಿಸಿತು. ಜಾನ್ ಥಾರ್ಟನ್ನನ ಶಿಬಿರದೆಡೆಗೆ—ವ್ಹಾಯಿಟ್ ನದಿಯ ಮುಖಕ್ಕೆ ಬಂದರು. ಒಮ್ಮೆ ಬಂಡಿ ನಿಂತಾಗ ನಾಯಿಗಳು ನಿಂತಲ್ಲಿಯೇ ಸತ್ತಂತೆ ಬಿದ್ದವು. ಮರ್ಸಿಡೆಸ್ ಕಣ್ಣೀರು

ಒರಸಿಕೊಂಡು ಜಾನ್ ಥಾರ್ಟನ್ನನೆಡೆಗೆ ನೋಡಿದಳು. ಚಾರ್ಲಸನು ವಿಶ್ರಾಂತಿ ಗೆಂದು ಒಂದು ಮುಂದಿಗೆಯ ಮೇಲೆ ಕುಳಿತಿದ್ದನು. ಅವನ ಮೊದಲಿನ ದೌಲತ್ತೆಂತಹದು ! ಎಲ್ಲ ಬಿಟ್ಟುಕೊಟ್ಟು ತೀರ ಹತಾಶನಾಗಿ ಉದ್ವಿಗ್ನತೆಯಲ್ಲಿ ಕುಳಿತಿದ್ದನು. ಹಾಲ್‌ನೇ ಮಾತಿಗೆ ಮೊದಲು ಮಾಡಿದ. ಜಾನ್ ಥಾರ್ಟನ್ನನು ತಾನು ಇದೀಗ ಬರ್ಚ ಗಿಡದ ಟೊಂಗೆಯಿಂದ ಸಿದ್ಧಗೊಳಿಸಿದ ಕೊಡಲಿಯನ್ನು ಮಸೆಯುವದರಲ್ಲಿ ಮಗ್ನನಾಗಿದ್ದ; ತನ್ನ ಕೆಲಸ ನಡೆಸುತ್ತಲೇ ಉತ್ತರಿಸುತ್ತಿದ್ದ.—ಕಟ್ಟಿಗೆ ಮುರಿದಂತೆ ಮಾತು; ಅಷ್ಟೆ ! ನಾಯಿಗಳ ಸ್ಥಿತಿಗತಿ ತಿಳಿದ ಅವನು ತನ್ನ ಮಾತನ್ನು ಇವರು ನಡೆಸಲಾರರೆಂದು ಗ್ರಹಿಸಿಯೂ ಸಲಹೆ ಸೂಚನೆ ಹೇಳಿದ.

" ಹಿಮ ನೆಲವೆಲ್ಲ ಕುಸಿಯುತ್ತಿದೆ; ಅದರಿಂದ ಜಾರುಬಂಡಿಗೆ ಅತಿ ಅಪಾಯವೆಂದು ಅವರು ಹೇಳಿದರು,"— ಹಾಲ್ ಥಾರ್ಟನ್ನನ ಎಚ್ಚರಿಕೆ ಕೇಳಿ ಉತ್ತರಿಸಿದ. ಇಂತಹವರ ಮೇಲೆ ಪ್ರಯೋಗ ಮಾಡುವದು ಹೆಡ್ಡತನವಾದೀತು. " ಜನರು ವ್ಹಾಯಿಟ್ ನದಿಯನ್ನು ಕೂಡ ಇವರು ದಾಟಲಾರರೆಂದಿದ್ದರು. ಆದರೆ ಇಲ್ಲಿಗೆ ಬಂದು ತಲುಪಿದೆವು " ಎಂದು ಹಾಲ್ ಆಢ್ಯತೆಯಿಂದ ನುಡಿದ.

" ಅವರು ಹೇಳಿದ್ದು ಸತ್ಯ" ಜಾನ್ ಥಾರ್ಟನ್ನ ಪ್ರತ್ಯುತ್ತರವಿತ್ತ: " ಹಿಮ ನೆಲ ಯಾವಾಗಲೂ ಕುಸಿಯುವಂತಹದೇ. ಏನೊ ಮೂರ್ಖರು ದೈವದ ಮೇಲೆ ಭಾರ ಹಾಕಿ ಮುಂಗ ಸಾಹಸಕ್ಕೆ ಕೈ ಇಕ್ಕುವರು. ಅಲಾಸ್ಕಾದ ಎಲ್ಲ ಸುವರ್ಣ ನನ್ನ ಮುಂದೆ ಸೂರೆಯಾದರೂ ಜೀವ ಕಳೆದುಕೊಳ್ಳುವ ಸಾಹಸಕ್ಕೆ ಮನಸ್ಸು ಮಾಡುವವನಲ್ಲ."

" ಹೌದು ನೀನು ಮೂರ್ಖನಲ್ಲವೆಂದೆ ಬಿಟ್ಟು ಎಂದೆನಿಸುವದು " ಎಂದ ಹಾಲ್.

" ಏನೇ ಆಗಲಿ, ಡಾಸನ್ನಿಗೆ ಹೊರಟೇ ತೀರುವದು." ಛಬುಕವನ್ನವನು ಛಟಾಯಿಸಿದ. " ಬಕ್, ಏಳು, ಎಲ್ಲರೂ ಏಳಿರಿ .... ಮಶ್ ಮಶ್....."

ಥಾರ್ಟನ್ನನು ತನ್ನ ಮಸೆಯುವ ಕಾಯಕ ನಡೆಸಿಯೇ ಇದ್ದ. ತನ್ನ ದಡ್ಡತನ ಹಾಗೂ ಬೇರೊಬ್ಬರ ಮೂರ್ಖತನದ ನಡುವೆ ನಿಂತು ವ್ಯವಹರಿಸುವದು ಎಂದೂ ಸೋಮಾರಿತನವಷ್ಟೇ ಎಂದು ಅವನಿಗೆ ಅನಿಸಿತು. " ಇಬ್ಬರು ಮೂವರು ಮೂರ್ಖರು ಏತಕ್ಕೆ ತಮ್ಮ ಯೋಜನೆಯನ್ನು ಬಿಟ್ಟು ಕೊಟ್ಟಾರು ? "

ಆದರೆ ಆಜ್ಞೆ ಹೊರಟಾಗಲೂ ದಳ ಮಿಟ್ಟೆಮಿಸುಕಲಿಲ್ಲ. ಹೊಡೆತ ಬಿದ್ದರೆ ಏಳುವ ಆ ಹಿಂದಿನ ಸ್ಥಿತಿ ಈಗ ಎಷ್ಟೂ ಉಳಿದಿರಲಿಲ್ಲ ನಾಯಿಗಳಿಗೆ. ಅತ್ತಿತ್ತ ಚಬಕ ಮಿಂಚಿತು; ತನ್ನ ನಿಷ್ಕರುಣೆ ಕಾರ್ಯದಲ್ಲಿ ತತ್ಪರ ವಾಯಿತು. ಜಾನ್ ಥಾರ್ಟನ್ ತನ್ನ ತುಟಿ ಕಚ್ಚಿದ. ಮೊಟ್ಟಮೊದಲು ಏಳಲು ಹವಣಿಸಿದುದು ಎಂದರೆ ಸೊಲೆಕ್ಸ. ಟೀಕ ಅನುಸರಿಸಿತು. ಜೋ ಮುಂದೆ ಬಂದಿತು; ವ್ಯಥೆಯಿಂದ ಬಳಲುತ್ತಿತ್ತು. ಪೈಕನ ಯತ್ನ ವ್ಯರ್ಥ ಹೋಯಿತು. ಅರ್ಧವರ್ಧ ಏಳುತ್ತಿರುವಾಗಲೆ ಎರಡು ಸಲ ಧೊಪ್ಪೆಂದು ಬಿದ್ದಿತು. ಬಕ್ ಕಲ್ಲಾಗಿತ್ತು. ಬಿದ್ದಲ್ಲಿಯೇ ಬಿದ್ದಿತ್ತು. ಚಬಕದ ಚುರುಕು ಅದಕ್ಕೆ ಮೇಲಿಂದ ಮೇಲೆ ತಗಲಿತು. ಅದು ದುಃಖಿಸಲಿಲ್ಲ. ಒದ್ದಾಡಲೂ ಇಲ್ಲ. ಥಾರ್ಟನ್ ಮಾತಾಡಬೇಕೆಂದು ಹಲವಾರು ಸಲ ಯತ್ನಿಸಿದ. ಆದರೆ ಮನಸ್ಸು ಬದಲಾಯಿತು. ಉದ್ವಿಗ್ನತೆಯಿಂದ ಕಣ್ಣು ಮಂಜಾದವು. ಹಾಗೆಯೇ ಚಬಕದ ಛಟಾಯಿಸುವದು ನಡೆಯಲು ಧೀರವೃತ್ತಿಯಿಂದ ಮುಂದೆ ಬಂದ.

ಹಾಲ್‌ನನ್ನು ಇಷ್ಟೊಂದು ರೊಚ್ಚಿಗೆಬ್ಬಿಸಲು ಬಕ್ ಇಂದೇ ಮೊದಲು ಸಲ ಕಾರಣವಾದದ್ದು. ಚಬಕವನ್ನು ಚೆಲ್ಲಿಕೊಟ್ಟು ಅವನು ಟೊಣಪೆ ತೆಗೆದು ಕೊಂಡ. ನುಗ್ಗುನುಗ್ಗಾಗುವ ಹೊಡೆತಗಳ ಸುರಿಮಳೆಯಾದರೂ ಬಕ್ ಕದಲಲಿಲ್ಲ. ತನ್ನ ಗೆಳೆಯರಂತೆ ಅದಕ್ಕೂ ಕೇವಲ ಎದ್ದು ನಿಲ್ಲಲು ಸಾಧ್ಯವಾ ಯಿತು. ಆದರೆ ಏಳಲು ಬೇಕೆಂತಲೆ ಮನಸ್ಸೂ ಮಾಡಲಿಲ್ಲ. ಮುಂದಿನ ಅನರ್ಥದ ಕಲ್ಪನೆ ಅದರ ಚಿತ್ತಭಿತ್ತಿಯಲ್ಲಿ ಸುಳಿದುಹೋಯಿತು. ಯಾವಾಗಿ ನಿಂದಲೂ ಆ ಹೆದರಿಕೆ ಬಾಧಿಸುತ್ತಲೇ ಇದ್ದಿತು. ಇಡೀ ದಿನ ಒಮವಲ್ಲೇ ಕಾಲು. ಸಂಕಟದ ಕರಾಳ ಛಾಯೆ ಈಗಲೇ ಅದಕ್ಕೆ ಹೊಡೆಹತ್ತಿತು. ಯಜಮಾನನ ಆಜ್ಞೆಯಂತೆ ಅಡಿ ಇಟ್ಟರೆ ಸಾಕು—ಮೃತ್ಯುವಿನ ದವಡೆ ದೂರವಿಲ್ಲ! ಅಂತೇ ನಸುವೂ ಕದಲಲಿಲ್ಲ. ಇಂದಿನ ವರೆಗಿನ ಅದರ ಯಮಯಾತನೆಯ ಮುಂದೆ ಈ ಟೊಣಪೆಯ ಹೊಡೆತ ಏನು ಮಾಡೀತು? ಎಷ್ಟು ಹೊಡೆದರೂ ನೋವು ಎನಿಸಲಿಲ್ಲ. ಮಿಣಿ ಮಿಣಿ ಮಿಣುಕುತ್ತಿದ್ದ ಜೀವಜ್ಯೋತಿ ಈಗ ನಂದಿ ಹೋದಂತೆಯೇ ಆಗಿತ್ತು. ಕಾಷ್ಠಲೋಷ್ಠಕ್ಕೆ ಸರಿಯದು. ತನ್ನನ್ನು ಯಾರೊ ಹೊಡೆಯುತ್ತಿರಬಹುದೆಂಬ ಅರಿವು ಅದಕ್ಕೆ ಅಸ್ಫುಟವಾಗಿ ಅನಿಸುತಿತು.

ಸ್ಪರ್ಧೆಯ ಭಾವನೆ ಅವರಿಂದ ಅಳಿಸಿಹೋಗಿತ್ತು. ಟೊಣಪೆಯ ಥೊಪ್ ಥೊಪ್ ಶಬ್ದದ ವಿನಹಾ ಅವಕ್ಕೆ ಯಾವುದೂ ತಿಳಿಯುತ್ತಿರಲಿಲ್ಲ. ಒಟ್ಟು ದೇಹವೇ ತನ್ನದಲ್ಲ ಎನ್ನುವ ಮಟ್ಟಿಗೆ ಬಂದು ಮುಟ್ಟಿತ್ತದು !

ಯಾವ ರೀತಿಯಿಂದಲೂ ಎಚ್ಚರಿಕೆ ಕೊಡದೆ ಜಾನ್ ಥಾರ್ಟನ ಏನೂ ತಿಳಿಯದಂತೆ ಒಟಗುಡುತ್ತ, ಟೊಣಪೆ ಹಿಡಿದ ಮನುಷ್ಯನ ಮೇಲೆ ಏರಿ ಹೋದ. ದೊಡ್ಡ ಗಿಡ ಕಡಿದುಕೊಂಡು ಮೈಮೇಲೆ ಬಿದ್ದವನಂತೆ ಹಾಲ್ ಕೆಳಗುರುಳಿದ. ಮರ್ಸಿಡೆಸ್ ಚಿಟ್ಟನೆ ಚೀರಿದಳು. ಚಾರ್ಲ್ಸ್ ತನ್ನ ಕಣ್ಣೀರು ಒರಿಸಿಕೊಂಡನು. ಮೈ ಬಿಗುವಿನ ಮೂಲಕ ಅವನಿಗೆ ಏಳಲಾಗಲಿಲ್ಲ !

ಜಾನ್ ಥಾರ್ಟನ್ನನಿಗೆ ಸಿಟ್ಟಿನ ಮೂಲಕ ಮಾತೇ ಹೊರಡಲಿಲ್ಲ. ಆವೇಶ ತಡೆದುಕೊಂಡು ಬಕ್ಕನ ಬಳಿ ನಿಂತ.

“ ಇನ್ನೊಮ್ಮೆ ಅವರ ಮೇಲೆ ಕೈ ಎತ್ತಿದ್ದಾದರೆ ನಿನ್ನ ಜೀವವೇ ಹೋದೀತೆಂದು ತಿಳಿ ” ಎಂದು ಥಾರ್ಟನ್ ನುಡಿದ.

ಕಟಿವಾಯಿಯಿಂದ ರಕ್ತ ಸುರಿಯುತ್ತಿತ್ತು. “ ಅದು ನನ್ನ ನಾಯಿ. ಬೇಕಾದದ್ದನ್ನು ಮಾಡೇನು ” ಹಾಲ್ ನುಡಿದ: “ ದೂರ ಸರಿ.–ನಾನು ಡಾಸನ್ನಿಗೆ ಹೊರಟೆ.”

ಥಾರ್ಟನ ಅವನ ಹಾಗೂ ಬಕ್‌ನ ನಡುವೆ ನಿಂತಿದ್ದ. ಸರಿಯುವ ಲಕ್ಷಣ ಕಾಣಲಿಲ್ಲ. ಹಾಲ್ ತನ್ನ ಬೇಟೆಯ ಚೂರಿ ಹೊರತೆಗೆದ. ಮರ್ಸಿಡೆಸ್ ಆಗ ಚೀರಿದಳು, ನಕ್ಕಳು, ಅತ್ತಳು,– ಕರೆದಳು. ಸನ್ನಿಬಡಿದವರಂತೆ ಅನೇಕ ವಿಧವಾಗಿ ನಡೆದುಕೊಂಡಳು. ಥಾರ್ಟನ್ ತನ್ನ ಕೈಕೊಡಲಿಯಿಂದ ಹೊಡೆದು ಮುಂಗೈಯಿಂದ ಚೂರಿ ಜಾರಿಸಿದ; ನೆಲದ ಮೇಲೆ ಬಿದ್ದಿತದು. ಮತ್ತೆ ಅವನು ಮುಂಗೈಗೆ ಹೊಡೆಯಲು ಕೊನೆಗೆ ಹಾಲ್ ಹೇಗೊ ಚೂರಿ ತೆಗೆದುಕೊಂಡು ಎರಡು ಕಡೆಗೆ ಗಾಯಗೊಳಿಸಿದ.

ಹಾಲ್‌ನಲ್ಲಿ ಇನ್ನು ಹೋರಾಟದ ಬುದ್ಧಿ ಉಳಿಯಲಿಲ್ಲ. ಅಲ್ಲದೆ ಅವನ ಸಹೋದರಿ ಗಟ್ಟಿಯಾಗಿ ಅವನ ಕೈ ಹಿಡಿದಿದ್ದಳು. ಬಂಡಿ ಎಳೆಯಲು ಏನೂ ತ್ರಾಣ ಉಳಿದಿಲ್ಲವೆಂಬಂತೆ ಸತ್ತಂತಾಗಿ ಬಕ್ ಬದಿಯಲ್ಲಿ ಬಿದ್ದಿತ್ತು. ಮುಂದೆ ಕೆಲ ನಿಮಿಷಗಳ ನಂತರ ಬಂಡಿ ಹೊರಟಿತು. ಪೈಕ ಮುಂದಾಳು. ಸೊಲೆಕ್ಸ ಹಿಂದುಗಡೆ. ಜೊ ಮತ್ತು ಟೀಕ ಎರಡರ ನಡುವೆ. ಬಕ್, ಅವರೆಲ್ಲ ಕ್ರಮಿಸು

ವದನ್ನು ಕಣ್ತುಂಬ ನೋಡಿತು. ಎಲ್ಲ ಕುಂಟುತ್ತಿದ್ದವು. ಝೋಲಿ ಹೊಡೆಯು ತ್ತಿದ್ದವು. ಮರ್ಸಿಡೆಸ್ ಭಾರವಾದ ಬಂಡಿಯನ್ನೇರಿದ್ದಳು. ಹಾಲ್ ಮುಂದಿದ್ದ. ಚಾರ್ಲ್‌ಸ್ ಹಿಂದೆ !

ಬಕ್ ಅವರನ್ನು ನಿರೀಕ್ಷಿಸುತ್ತಿರುವಾಗ ಥಾರ್ಟನ್ ಅವರ ಬಳಿ ಮೊಣ ಕಾಲೂರಿ ಕುಳಿತು, ತನ್ನ ಬಿರುಸು ಕೈಯಿಂದ ಅದರ ಮುರಿದ ಎಲುವುಗಳನ್ನು ಸರಿಗೊಳಿಸುತ್ತಿದ್ದ. ಎಲ್ಲದರ ಸಂಶೋಧನೆ ಮಾಡುವದಾದಾಗ, ಮೈ ಬರಿ ಜಿಜ್ಜಿ, ಭಯಂಕರ ಹಸಿವು ಆದದ್ದಷ್ಟೆ ತಿಳಿಯಿತು. ಜಾರು ಬಂಡಿ ಮುಕ್ಕಾಲು ಮೈಲು ದೂರ ಕ್ರಮಿಸಿತ್ತು. ನಾಯಿ ಹಾಗೂ ಮನುಷ್ಯ, ಅದು ಸಾಗುವ ದನ್ನು ಕಂಡರು—ಹಿಮನೆಲದಗುಂಟ. ಒಮ್ಮಿಂದೊಮ್ಮೆಲೆ ಬಂಡಿಯ ಹಿಂಭಾಗ ಕೊರಕಲಿನಲ್ಲಿ ಕುಸಿಯುವದು ಕಂಡಿತು. ಹಾಲ್ ಜೋತುಬಿದ್ದಿದ್ದ ಅದಕ್ಕೆ. ಮರ್ಸಿಡೆಸ್‌ಳ ಚೀತ್ಕಾರ ಸ್ಪಷ್ಟವಾಗಿ ಕೇಳಿತು. ಚಾರ್ಲ್‌ಸ್ ಹಿಂದೆ ಸರಿದು ಓಡಲು ಹವಣಿಸಿದ. ಆದರೆ ಇಡೀ ದೊಡ್ಡ ಹಿಮರಾಶಿಯೇ ಕುಸಿದು ನಾಯಿಗಳೂ ಮನುಷ್ಯರೂ ಜಲಸಮಾಧಿಹೊಂದಿದರು.

ಜಾನ್ ಥಾರ್ಟನ್ ಹಾಗೂ ಬಕ್ ಒಬ್ಬರನ್ನೊಬ್ಬರು ಸಾಕೂತವಾಗಿ ನೋಡಿದರು.

“ ದೆವ್ವ ನಾಯಿ, ನೀನು ! ” ಎಂದು ಥಾರ್ಟನ್ ಉದ್ಗಾರ ತೆಗೆದ. ಬಕ್ ಅವನ ಕೈ ನೆಕ್ಕಿತು.

## ೬. ಮಾನವನ ಮಮತೆಗಾಗಿ

ಹಿಂದಿನ ಡಿಸೆಂಬರ ತಿಂಗಳಲ್ಲಿ ಜಾನ್ ಥಾರ್ಟನ್‌ನನ್ನು ಅವನ ಸಂಗಡಿಗರು ಹಿಂದೆ ಬಿಟ್ಟುಹೋದಾಗ ಚಳಿ ವಿಶೇಷವಿತ್ತು. ಡಾಸನ್ನಿಗೆ ನಾವೆ ತಯಾರಿಸಲು ಅವರು ಕಟ್ಟಿಗೆ ತರಲು ಹೋಗಿದ್ದರು. ಬಕ್‌ನ ಬಿಡುಗಡೆಗಾಗಿ ಅವನು ಹೆಣಗಿದಾಗ ಇನ್ನೂ ಕುಂಟುತ್ತಲೆ ಇದ್ದ. ಹಸೆಯಲ್ಲಿ ಈಗ ಕಾವು ಹುಟ್ಟಿದ್ದರಿಂದ ಅವನ ಕುಂಟುವಮೂ ನಿಂತಿತ್ತು. ನದೀ ತೀರದಲ್ಲಿದ್ದು, ಆ ವಸಂತ ಋತುವಿನ ಹರಿಯುವ ನೀರು, ಹಾಡುವ ಪಕ್ಷಿ, ಇನ್ನೂ ನಿಸರ್ಗದ ಸೊಬಗನ್ನು ಬಕ್ ಕಣ್ತುಂಬ ನೋಡಿ ತನ್ನ ಹಿಂದಿನ ಶಕ್ತಿಯನ್ನೆಲ್ಲ ಕ್ರಮೇಣ ಸಂಚಯಿಸುತ್ತ ನಡೆದಿತ್ತು.

ಸಾವಿರಾರು ಮೈಲು ಪ್ರವಾಸ ಮಾಡಿದ ನಂತರ ಉಂಟಾಗುವ ವಿಶ್ರಾಂತಿ ಬಹಳ ಹಿತಕಾರಿ. ಬಕ್‌ನ ಗಾಯಗಳು ಮಾಯುತ್ತ ಬಂದಂತೆ ಸೋಮಾರಿತನವೂ ಅದರಲ್ಲಿ ಉಂಟಾಯಿತು. ನರಗಳು ಉಬ್ಬಿದವು. ಎಲುವುಗಳನ್ನು ಮುಚ್ಚಲು ಮಾಂಸ ಬಂದಿತು. ಬಕ್, ಥಾರ್ಟನ್, ಸ್ಕೀಟ, ನಿಗ್—ಎಲ್ಲರೂ ನಾವೆಯ ದಾರಿಕಾಯುತ್ತಿದ್ದರು—ಡಾಸನ್ನಿಗೆ ಹೋಗಲು. ಸ್ಕೀಟ್ ಆಯಿರಿಶ್ ನಾಯಿ; ಬಕ್‌ನ ಹೊಸ ಗೆಳೆಯ. ಅದರಲ್ಲಿ ವೈದ್ಯಕಿವೃತ್ತಿಯ ಲಕ್ಷಣಗಳಿದ್ದವು—ಹಲವು ನಾಯಿಗಳಿಗಿರುವಂತೆ ! ಬಕ್‌ನ ಗಾಯಗಳನ್ನು ತೊಳೆದು ಸ್ವಚ್ಛಗೊಳಿಸುತ್ತಿತ್ತು. ಪ್ರತಿದಿನ ಊಟವಾಡೊಡನೆ ಈ ಕಾರ್ಯವನ್ನು ಅದು ನಿಯಮಿತತನದಿಂದ ಮಾಡುತ್ತಿತ್ತು. ನಿಗ್ ದೊಡ್ಡ ಕಪ್ಪು ನಾಯಿ. ಅಷ್ಟು ಗೆಳೆತನದ ವೃತ್ತಿಯದಲ್ಲ. ಕಣ್ಣಿನಲ್ಲಿ ಕಾಂತಿ ಇದ್ದಿತು. ಬೇಟೆಯೆಂದರೆ ಬಲು ಪ್ರೀತಿ. ಒಟ್ಟಿನಲ್ಲಿ ಒಳ್ಳೆ ಸ್ವಭಾವ.

ಒಂದು ಆಶ್ಚರ್ಯ ಸಂಗತಿ, ಬಕ್‌ನ ದೃಷ್ಟಿಯಿಂದ ಹೇಳುವದಾದರೆ, ಇವಾವವೂ ಅದರ ವಿಷಯಕ್ಕೆ ಅಸೂಯೆ ತೋರುತ್ತಿರಲಿಲ್ಲ. ಜಾನ್ ಥಾರ್ಟನ್ನನಷ್ಟೆ ಇವುಗಳಮೂ ಅದರ ಮೇಲೆ ಪ್ರೇಮ. ಬಕ್‌ನಲ್ಲಿ ಕಸುವು ಬರುತ್ತ ನಡೆದಂತೆ, ಎಲ್ಲ ನಾಯಿಗಳು ನಾನಾಬಗೆಯ ವಿಚಿತ್ರ ಆಟಗಳನ್ನು

ಅದರೊಡನೆ ಆಡಹತ್ತಿದವು. ಥಾರ್ಟನ್ನನೂ ಅವುಗಳಲ್ಲಿ ಭಾಗವಹಿಸಲು ಎಷ್ಟೋ ಸಲ ಹಿಂದು ಮುಂದೆ ನೋಡುತ್ತಿರಲಿಲ್ಲ. ನೈಜ ಪ್ರೇಮ ಈಗ ಉದಿಸಿತು. ಸೂರ್ಯ ಚುಂಬಿತ ಸಾಂತಾ ಕ್ಲೇರಾ ಕೊಳ್ಳದಲ್ಲಿಯ ನ್ಯಾಯಾಧೀಶ ಮಿಲ್ಲರ ಮಕ್ಕಳೊಡನೆ ಸಹ ಇಂತಹ ಪ್ರೇಮದ ಅನುಭವ ಉಂಟಾಗಿರಲಿಲ್ಲ. ಅವರ ಸಂಗಡ ಹೋಗಿ ಬೇಟೆಯಾಡುವದು ಒಂದು ವಿಶೇಷವಿತ್ತು. ನ್ಯಾಯಾಧೀಶನಾದರೂ ದೊಡ್ಡಮನಸ್ಸಿನವ. ಆದರೆ ಜಾನ್ ಥಾರ್ಟನ್ನನ ಪ್ರೇಮವೆಂದರೆ ಒಂದು ಬಗೆಯ ಹುಚ್ಚು.

ಇವನೆ ಅದರ ಜೀವ ಉಳಿಸಿದ್ದ. ಇದಕ್ಕೂ ಹೆಚ್ಚಿನವೆಂದರೆ ಆದರ್ಶ ಒಡೆಯನಾಗಿದ್ದ. ಬೇರೆ ಜನ ಕರ್ತವ್ಯವೆಂದು ನಾಯಿಗಳನ್ನು ಪೋಷಿಸುತ್ತಿದ್ದರು. ಆದರೆ ಜಾನ್ ನಾಯಿಗಳನ್ನು ಮನೆಯ ಮಕ್ಕಳೋಪಾದಿಯಾಗಿ ಜೋಪಾನ ಮಾಡುತ್ತಿದ್ದ. ಒಳ್ಳೆ ಮಾತಾಡಲು ಎಂದೂ ಅವನು ಮರೆಯುತ್ತಿರಲಿಲ್ಲ. ಅವನು ಅದನ್ನು ಅನೇಕ ಬಗೆಯಾಗಿ ಪ್ರೀತಿಸುತ್ತಿದ್ದ. ಹ್ಯಾವಡವುತ್ತಿದ್ದ. ಮುಖಕ್ಕೆ ಮುಖ ಹಚ್ಚುತ್ತಿದ್ದ. ತಪ್ಪು ತಪ್ಪು ಹೆಸರುಗಳಿಂದ ಕರೆಯುತ್ತಿದ್ದ. ಅವೇ ಅದಕ್ಕೆ ಪ್ರೀತಿಯ ಕುರುಹಾಗುತ್ತಿದ್ದವು. ಆಗ ಅದರ ಆನಂದಕ್ಕೆ ಮೇರೆ ಉಳಿಯುತ್ತಿರಲಿಲ್ಲ. ಕೈ ಬಿಟ್ಟಾಗ ಹಾರಿ ಬಂದು ಅದು ವಿಲಕ್ಷಣವಾಗಿ ವಾತ್ಸಲ್ಯದ ನಗು ನಗುತ್ತಿತ್ತು. 'ನಿನಗೆ ಮಾತಾಡುವದು ಒಂದು ಸಾಧಿಸಿಲ್ಲ' ಎಂದು ಥಾರ್ಟನ್ ಕೊನೆಗೆ ಅನ್ನುತ್ತಿದ್ದ.

ಬಕ್‌ನ ಪ್ರೀತಿ ಸಾಧಾರಣ ನೋವು ಉಂಟುಮಾಡುವ ಜಾತಿಯದೇ. ಒಮ್ಮೊಮ್ಮೆ ಅದು ಥಾರ್ಟನ್ನನ ಕೈಯನ್ನು ತನ್ನ ಹಲ್ಲುಗಳ ನಡುವೆ ಹಿಡಿಯುತ್ತಿತ್ತು. ಆಗೀಗ ಹಲ್ಲು ನಟ್ಟು ರಕ್ತವೂ ಬರುತ್ತಿತ್ತು. ಅದರ ಹೃದಯದ ಪ್ರೀತಿಯ ಅರಿವಾಗಿ, ಇದೊಂದು ಉತ್ಕಟಪ್ರೇಮದ ದ್ಯೋತಕವೆಂದು ಅವನು ಬಗೆಯುತ್ತಿದ್ದ.

ಪ್ರೀತಿಯನ್ನು ಅವ್ಯಕ್ತವಾಗಿ ತೋರಿದರೂ ಬಕ್‌ನಿಗೆ ಸಮಾಧಾನ. ಆದರೆ ಸ್ಕೀಟ ಹಾಗಲ್ಲ. ಬೆನ್ನು ತಟ್ಟದಿದ್ದರೆ ಸಂತೋಷಹೊಂದುತ್ತಿರಲೇ ಇಲ್ಲ. ನಿಗ್ ತಲೆ ತಂದು ಒಡೆಯನ ಮೊಣಕಾಲಿಗೆ ಹಚ್ಚದೆ ಬಿಡುತ್ತಿದ್ದಿಲ್ಲ. ಥಾರ್ಟನ್ನ ಬಕ್‌ರ ಪ್ರೀತಿ ಅಸಾಧಾರಣ ತರಗತಿಯದು. ಒಬ್ಬರನ್ನೊಬ್ಬರು ಅರ್ಥಪೂರ್ಣವಾಗಿ ನೋಡುವರು. ಮಾತು ಇಲ್ಲ. ಹೃದಯಗಳ ಮಿಲನ ಮಾತ್ರ ನಿಜ.

ತನ್ನ ಬಿಡುಗಡೆಗೆ ಹೆಣಗಿ, ಸಾಧಿಸಿದ ಒಡೆಯನನ್ನು ಬಕ್ ಬಹಳ ಕಾಲ ಅಗಲಿ ಇರುತ್ತಿರಲಿಲ್ಲ. ಎಲ್ಲಿ ಹೋದರೂ ಅವನ ಹಿಂದೆಯೆ! ಹಿಂದೆ ಉತ್ತರ ಪ್ರದೇಶದ ಪ್ರವಾಸದಲ್ಲಿ ಇಂಥ ನಿಶ್ಚಿತ ಒಡೆಯ ದೊರೆತಿರಲಿಲ್ಲ ಅದಕ್ಕೆ. ಉಳಿದ ಫ್ರ್ಯಾಂಕೊಯಿಸ್, ಪೆರಾಲ್ಟ, ಸ್ಕಾಚ್ ಮನುಷ್ಯನಂತೆ ಇವನೂ ಎಲ್ಲಿ ಕೈ ಬಿಟ್ಟು ಹೋಗುವನೊ ಎಂದು ಅದಕ್ಕೆ ಇಲ್ಲದ ಸಂಶಯ. ಕನಸಿನಲ್ಲಿಯೂ ಇದೆ ಪ್ರಬಲ ಹೆದರಿಕೆ. ಹೀಗೆ ಆದಾಗ ಅದು ಮೆಲ್ಲನೆ, ಚಳಿಯಲ್ಲಿ ಹೊರಗೆ ಬಂದು ಡೇರೆಯಲ್ಲಿಯ ಒಡೆಯನ ಉಸಿರಾಟದ ಧ್ವನಿ ಕೇಳಿ ಮತ್ತೆ ತನ್ನ ನಿಯಮಿತ ಸ್ಥಳಕ್ಕೆ ಬಂದು ಮಲಗುತ್ತಿತ್ತು.

ಥಾರ್ಟನ್ನನ ವಿಷಯಕ್ಕೆ ಬಕ್‌ನ ಪ್ರೇಮ ಇಷ್ಟು ಬೆಳೆದು ನಾಗರಿಕವಾದರೂ ಹಿಂದಿನ ಕಾಡು ಸ್ಥಿತಿಯ ಲಕ್ಷಣ ಇನ್ನೂ ಪೂರ್ಣ ಮಾಯವಾಗಿರುತ್ತಿರಲಿಲ್ಲ. ವಿಶ್ವಾಸ ಶ್ರದ್ಧೆ ಕಡಿಮೆ ಇರಲಿಲ್ಲ. ಆದರೆ ಕಾಡುತನ ಒಂದು ಪ್ರಮಾಣದಲ್ಲಿತ್ತು. ಕಾಡಿನಿಂದಲೇ ಬಂದು ಅದು ಥಾರ್ಟನ್ನನ ಕಾಲಬಳಿ ಬೆಂಕಿಯ ಹತ್ತಿರ ಕುಳಿತಿರುತ್ತಿತ್ತು. ಅನಂತ ಪೀಳಿಗೆಗಳ ನಾಗರಿಕತೆ ಅದಕ್ಕೆ ಬರುವದೆಂತು? ಅನುಪಮ ಪ್ರೇಮದ ಮೂಲಕ ಅದು ಒಡೆಯನ ವಸ್ತುಗಳನ್ನು ಕದಿಯುತ್ತಿರಲಿಲ್ಲ. ಉಳಿದವರ ವಿಷಯದಲ್ಲಿ ಬೇರೆ. ಅಲ್ಲಿ ಕದ್ದರೂ ಬಯಲಿಗೆ ಬಾರದಂತೆ ಯೋಜಿಸುವ ಕಲೆ ಅದಕ್ಕೆ ಸಾಧಿಸಿತ್ತು.

ಅದರ ಮೋರೆ ಹಾಗೂ ಶರೀರಕ್ಕೆ ಅನೇಕ ನಾಯಿಗಳ ಹಲ್ಲಿನಿಂದ ಗಾಯವಾಗಿದ್ದವು. ಗತ್ತುಗಾರಿಕೆಯಿಂದ ಹೋರಾಡುತ್ತಿತ್ತು. ಸ್ಕೀಟ್ ಮತ್ತು ನಿಗ್ ಇವುಗಳಿಗೆ ಜಗಳದ ಇಚ್ಛೆ ಇರಲಿಲ್ಲ. ಆದರೆ ಯಾವ ಜಾತಿಯ ನಾಯಿ ಬಂದರೂ ಬಕ್ಕನ ಒಡೆತನ ಒಪ್ಪಿಕೊಳ್ಳಬೇಕಾಗುತ್ತಿತ್ತು. ಬಕ್‌ನಿಗೆ ದಯೆ ಇರಲಿಲ್ಲ. ತನಗೇ ವಿಷದ ಹಲ್ಲಿನ ಹಾಗೂ ಟೊಣಪೆಯ ಕಾಯಿದೆ ಹಚ್ಚಿದ್ದರು. ಜೀವ ಹೋಗುವ ಗಳಿಗೆಯ ವರೆಗೆ ಅದು ಹೋರಾಡಿತ್ತು. ಸ್ಪಿಟ್ಝನಿಂದ ಅದು ಪಾಠ ಕಲಿತಿತ್ತು. ಅದಕ್ಕೆ ಎರಡೇ ದಾರಿಗಳಿದ್ದವು—ಆಳುವದು, ಆಳಿಸಿಕೊಳ್ಳುವದು. ಹೆರವರಿಗೆ ದಯೆದೋರುವದೆಂದರೆ ನಿಶ್ಶಕ್ತತೆಯ ಲಕ್ಷಣ. ಕಾಡು ಜೀವನದಲ್ಲಿ ದಯೆಗೆ ಸ್ಥಾನವೆಲ್ಲಿ? ದಯೆ ಎಂದರೆ ಹೆದರಿಕೆ, ಇಲ್ಲವೇ ಸಾವಿಗೆ ಸರಿ ಎಂಬ ಕಲ್ಪನೆ ಬೇರೂರಿತ್ತು. ಕೊಲ್ಲು ಇಲ್ಲವೆ ಸಾಯಿ ಇದೆ ನಿಜವಾದ ಕಾನೂನು.

ತನ್ನ ವಯಸ್ಸಿಗಿಂತಲೂ ಹೆಚ್ಚಿನ ಅನುಭವ ಅದಕ್ಕೆ ಉಂಟಾಗಿತ್ತು. ಭೂತ ವರ್ತಮಾನ ಅದರ ದೃಷ್ಟಿಯಲ್ಲಿ ಹೊಂದಿಕೊಂಡಿದ್ದವು. ಎದುರಿಗೆ ಅನಂತತೆ. ಈ ಮೂರರ ತಳುಕಿನಿಂದ, ಸಮುದ್ರದಲ್ಲಿಯ ತೆರೆಗಳಲ್ಲಿಯಂತೆ, ಅದರ ಜೀವನ ದಲ್ಲಿ ತಾಳಲಯಬದ್ಧತೆಯುಂಟಾಗಿದ್ದವು. ಜಾನ್ ಥಾರ್ಟನ್ನನ ಬಳಿ ಅದು ಕೂಡುತ್ತಿತ್ತು. ಹತ್ತಿರ ಬೆಂಕಿ,—ಕಾಸಿಕೊಳ್ಳಲು. ಹಿಂದೆ ಉಳಿದ ನಾಯಿ— ನೆರಳಿನಂತಿದ್ದವು.

ಇಂತಹ ಎಷ್ಟೊ ನೆರಳುಗಳು ಅದನ್ನು ಕೈ ಮಾಡಿ ಕಾಡಿಗೆ ಬಾ ಎಂದು ಕರೆಯುತ್ತಿದ್ದವು. ಅಡವಿಯಲ್ಲಿ ಹೋಗಲೆ ಎಂದು ಒಮ್ಮೊಮ್ಮೆ ಬಕ್‌ಗೆ ವಿಚಾರ ಬರುತ್ತಿತ್ತು. ಆದರೆ ಭೂದೇವಿಯ ಮೃದು ವಕ್ಷಃಸ್ಥಲ, ಗಿಡದ ನೆರಳು ಛಾಯೆ, ಥಾರ್ಟನ್ನನ ಅಪ್ರತಿಮ ವಾತ್ಸಲ್ಯ—ಎಲ್ಲ ಮಿಂಚಿ ಮತ್ತೆ ಮನಸ್ಸು ಹಿಂದೆಗೆಯುವದು. ಮತ್ತೆ ಬೆಂಕಿಯ ಬಳಿಗೆ ಬಂದ ಕೂಡುವದು.

ಥಾರ್ಟನ್ನನದೊಂದೆ ಬಂಧನ ಅದಕ್ಕೆ. ಉಳಿದೆಲ್ಲ ಪ್ರಾಣಿ ವರ್ಗ ಅದಕ್ಕೆ ತುಚ್ಛ. ಆಗಾಗ ಬಂದ ಪ್ರವಾಸಿಕರು ಮೈತಟ್ಟಿದರೇನಾಯಿತು ? ಹ್ಯಾನ್ಸ ಹಾಗೂ ಪೇಟಿ ನಾವಿಗಾಗಿ ಹೋಗಿ ಮರಳಿ ಬಂದಾಗ ಬಕ್ ಅವರನ್ನು ಕಣ್ಣೆತ್ತಿ ಕೂಡ ನೋಡಲಿಲ್ಲ. ಕೊನೆಗೆ ಥಾರ್ಟನ್ನನ ಜನ ಅದು ಎಂದಾಗ ಕೊಂಚ ಆತ್ಮೀಯತೆ ತಂದುಕೊಂಡಿತು. ಉಪಕರಿಸುವಂತೆ ಅವರಿಂದ ಕಾಣಿಕೆ ಸ್ವೀಕರಿಸುತ್ತಿತ್ತು. ಅದರ ದೃಷ್ಟಿಯಾದರೂ ಥಾರ್ಟನ್ನನಂತೆ ಉದಾರ, ವಿಶಾಲ. ದೋಣಿಯನ್ನು ಸಿದ್ಧಗೊಳಿಸಿ ಡಾಸನ್ನಿನ ಹತ್ತಿರದ ಕಟ್ಟಿಗೆ ಕೊರೆ ಯುವ ಕಾರಖಾನೆಗೆ ಹೊರಡುವ ಮುನ್ನ ಅವರಿಗೆ ಬಕ್‌ನ ರೀತಿ ನೀತಿಗಳು ಅರ್ಥವಾಗಿದ್ದವು. ಸ್ಕೀಟ ಹಾಗೂ ನಿಗ್‌ರೊಡನೆ ಗೆಳೆತನವೂ ಬೆಳೆದಿತ್ತು

ಜಾನ್ ಥಾರ್ಟನ್ನನ ಬಗ್ಗೆ ಅದರ ಪ್ರೀತಿ ಹೆಚ್ಚುತ್ತಲೆ ಇದ್ದಿತು. ಬೇಸಿ ಗೆಯ ಪ್ರವಾಸದಲ್ಲಿ ಅವನೊಬ್ಬನೇ ಅದರ ಮೇಲೆ ಒಜ್ಜೆ ಹೊರಿಸಲು ಸಮರ್ಥ. ಥಾರ್ಟನ್ನನು ಹೇಳಿದ ಯಾವ ಕೆಲಸವೂ ಅದಕ್ಕೆ ಅಸಾಧ್ಯಕೋಟಿಯದೆನಿಸು ತ್ತಿರಲಿಲ್ಲ. ಒಮ್ಮೆ ಜನರು, ನಾಯಿಗಳು ಬಂಡೆಗಲ್ಲಮೇಲೆ ಕುಳಿತಿದ್ದರು. ಕೆಳಗೆ ಮೂರು ನೂರು ಫೂಟು ಆಳದ ಪ್ರಪಾತ. ಥಾರ್ಟನ್ ತುದಿಗೆ ಕುಳಿ ತ್ತಿದ್ದ. ಹೆಗಲ ಹತ್ತಿರ ಬಕ್. ತಾನು ಒಂದು ಪ್ರಯೋಗ ಮಾಡುವೆನೆಂದು ಹ್ಯಾನ್ಸ, ಪೇಟಿ ಅವರಿಗೆ ಹೇಳಿದ. ‘ ಕೆಳಗೆ ಜಿಗಿ ’ ಎಂದು ಆಜ್ಞಾಪಿಸಿದ

ಬಕ್‌ಸಿಗೆ. ಬೆರಳು ಮಾಡಿ ಕೊಳ್ಳದಿಡೆ ತೋರಿಸಿದ. ಅವರ ಸಾಹಸ ಕಂಡು ಎಲ್ಲರೂ ದಂಗಾಗಿ ಕುಳಿತರು.

ಸರ್ಕಲ್ ಸಿಟಿಯಲ್ಲಿ ಪೇಟೆಗೆ ವಿಚಿತ್ರ ಅನುಭವ ಬಂದಿತು. ಬ್ಲ್ಯಾಕ್ ಬರ್ಟನ್ ಎಂಬ ಒಬ್ಬ ದುಷ್ಟನು ಉಪಹಾರ ಗೃಹದಲ್ಲಿ ಒಬ್ಬನೊಡನೆ ಜಗಳ ತೆಗೆದಿದ್ದ. ಥಾರ್ಟನ್ ಬಿಡಿಸಲು ನಡುವೆ ಹೋದ. ಬಕ್ ಆಗ ಮೂಲಿ ಹಿಡಿದು ಕುಳಿತಿತ್ತು. ತನ್ನ ಪಂಜರದ ಮೇಲೆ ತಲೆ ಇರಿಸಿತ್ತು. ಒಡೆಯನ ಹಾವ ಭಾವವನ್ನೆಲ್ಲ ಸೂಕ್ಷ್ಮವಾಗಿ ನಿರುಕಿಸುತ್ತಿತ್ತು. ಅನಿರೀಕ್ಷಿತವಾಗಿ ಬರ್ಟನ್ ಹೊಡೆದ. ಥಾರ್ಟನ್ನನ ಝೂಲಿಹೋಯಿತು. ಉಪಹಾರಗೃಹದ ಸಲಾಖಿ ಹಿಡಿದು ನಿಂತುಕೊಂಡ.

ಬಳಿಯಲ್ಲಿ ನಿಂತವರಿಗೆ ನಾಯಿಯ ಗುರುಗುಟ್ಟುವದು ಕೇಳಲಿಲ್ಲ. ಕೂಡಲೆ ಗರ್ಜನೆ ಮಾತ್ರ ಕೇಳಿಸಿತು. ಬಕ್ ನೆಲ ಬಿಟ್ಟು ಟಣ್ಣನೆ ಬರ್ಟನ್‌ನ ಗಂಟಲಿಗೆ ಹಾರಿತು. ಮುಂದೆ ಕೈ ಚಾಚಿ ಪ್ರಾಣ ಉಳಿಸಿಕೊಳ್ಳ ಬೇಕಾದರೆ ಸಾಕುಸಾಕಾಯ್ತು ಅವನಿಗೆ. ಅವನು ನೆಲದ ಮೇಲೆ ಬಿದ್ದ. ಬಕ್ ಅವನ ಮೈಮೇಲೆ! ಮೈಯಲ್ಲೆಲ್ಲ ಕಡಿದು, ಗಂಟಲು ಬಿಡಲೊಲ್ಲದು. ಗಟ್ಟಿ ಹಿಡಿಯಿತು ಹಲ್ಲಿನಿಂದ. ರಕ್ತ ಸೂಸಿತು. ಮಾಂಸ ಹೊರಬಂದಿತು. ಕೂಡಿದ ಜನ ಬಕ್‌ನನ್ನು ಎಳೆದುಕೊಂಡರು. ಕಟ್ಟಿಗೆಯಿಂದ ಹೊಡೆದು ಶಾಂತಮಾಡಿದರು. ಸರ್ಜನ್ನನು ಬಂದು ಚಿಕಿತ್ಸೆ ನಡೆಸಿದ. ಒಂದು ಸಭೆ ಕೂಡಿ ಕಡೆಗೆ, 'ಸಿಟ್ಟಿಗೆಬ್ಬಿಸಿದುದರಿಂದ ನಾಯಿ ಕಡಿಯಿತು' ಎಂದು ತೀರ್ಮಾನವಿತ್ತಿತು. ಬಕ್‌ನ ಬಿಡುಗಡೆಯಾಯಿತು!

ಚೂಪಾದ ಬಂಡೆಗಲ್ಲುಗಳುಳ್ಳ ನದಿಯ ಒಂದು ಮಡುವಿನಲ್ಲಿ ಹ್ಯಾನ್ಸ ಒಮ್ಮೆ ಹಗ್ಗವನ್ನು ಚೆಲ್ಲಿದ. ಥಾರ್ಟನ್ ನಾವನ್ನು ನಡೆಸುತ್ತ ಹಗ್ಗದ ತುದಿ ಹಿಡಿದಿದ್ದ. ಕೋಲಿನ ಸಹಾಯದಿಂದ ದಂಡೆಗುಂಟ ನಾವನ್ನು ದಾಟಿಸುತ್ತಿದ್ದ. ಬಂಡೆಗಲ್ಲಿಗೆ ತಾಗದಂತೆ ಸಾಗಿಸುತ್ತಿದ್ದ. ಪ್ರವಾಹದ ರಭಸಕ್ಕೆ ನಾವು ಬುಡ ಮೇಲಾಗಿ ಥಾರ್ಟನ್ ಉರುಳಿದ. ನದಿಯ ಸೆಳವಿನಗುಂಟ ಕೊಚ್ಚಿಕೊಂಡು ಹೋಗಹತ್ತಿದ.

ಬಕ್ ಇದನ್ನು ನೋಡಿ ಸಹಿಸದೆ ಒಡೆಯನ ರಕ್ಷಣೆಗೆಂದು ಟಣ್ಣನೆ ನೀರಿನಲ್ಲಿ ಜಿಗಿಯಿತು. ನೀರಿನ ಹುಚ್ಚು ವೇಗದಲ್ಲಿ ಹೋಗುತ್ತಿರುವ ಥಾರ್ಟನ್

ನನ್ನು ಜಗ್ಗತೊಡಗಿತು. ನಾಯಿಯ ಬಾಲವನ್ನು ಥಾರ್ಟನ್ ಗಟ್ಟಿಯಾಗಿ ಹಿಡಿದಾಗ ಅದು ಮುಂದಕ್ಕೆ ಈಸುಬಿದ್ದಿತು. ಅಷ್ಟು ಪ್ರಗತಿ ಸಾಧಿಸಲಿಲ್ಲ ಅದಕ್ಕೆ. ಪ್ರವಾಹದ ಗುಂಟ ಅದರ ವೇಗವು ಹೆಚ್ಚಿತು. ಕಲ್ಲುಗಳಿವೆ ಅಲ್ಲಿ ಎಂದು ಈರ್ವರಿಗೂ ಎಚ್ಚರಿಕೆ ಕೊಟ್ಟರು ಉಳಿದವರು. ಇಂತಹದರೊಡನೆ ಹೋರಾಡಿ ಪಾರಾಗುವದು ಸುಲಭ ಸಾಧ್ಯವೆನಿಸಲಿಲ್ಲ ಥಾರ್ಟನ್ನನಿಗೆ ! ಒಂದೆರಡು ಕಲ್ಲು ಅವನಿಗೆ ಗಾಯಗೊಳಿಸಿದವು. ಒಂದು ಬಂಡೆಯನ್ನಾಶ್ರಯಿಸಿ, ' ಬಕ್, ಅಲ್ಲಿಗೆ ನಡೆ ' ಎಂದು ತೋರಿಸಿದ.

ಮರಳಿ ಮರಳಿ ಆಜ್ಞೆ ಬರಲು ಬಕ್ ಒಡೆಯನನ್ನು ತೊರೆದು ಅವನು ಹೇಳಿದಲ್ಲಿಗೆ ಹೋಯಿತು. ಥಾರ್ಟನ್ ಬಂಡೆಗಲ್ಲಿಗೆ ಜೋತುಬಿದ್ದ. ಬಕ್‌ನ ಕೊರಳಿಗೆ ಗಾಯವಾಗದಂತೆ, ಈಸಲು ಬರುವಂತೆ ನಾವನ್ನು ಕಟ್ಟಿದರು. ಅದರಲ್ಲಿ ಅವನು ಮರಳುವದು. ಒಂದೆರಡು ಸಲ ಈಜುವ ಹದ ಸಾಧಿಸಲಿಲ್ಲ.

ಹ್ಯಾನ್ಸನ ಕೈಯಲ್ಲಿ ನಾವಿನ ಹಗ್ಗವಿತ್ತು. ಬಕ್ ಅರ್ಧ ಮುಳುಗುತ್ತಿತ್ತು ಒಮ್ಮೊಮ್ಮೆ. ಅದರ ಬಾಯಿಯಲ್ಲಿ ನೀರು ಹೋಗದಂತೆ ತಪ್ಪಿಸುತ್ತಿದ್ದರು ಹ್ಯಾನ್ಸ್ ಹಾಗೂ ಪೇಟೆ. ಥಾರ್ಟನ್ನನ ಕ್ಷೀಣ ಧ್ವನಿ ಬಂಡೆಗಲ್ಲಿನ ಹತ್ತರ ಕೇಳಿಸಿದಾಗ ಬಕ್‌ನ ಆನಂದಕ್ಕೆ ಮೇರೆ ಉಳಿಯಲಿಲ್ಲ. ಬಹಳ ಸಾಹಸ ಮಾಡಿ ಸಮೀಪಿಸಿತು.

ಹಗ್ಗವನ್ನು ಜಾಣತನದಿಂದ ಜಗ್ಗಿ ನಾಯಿಯು ಮುಳುಗದಂತೆ ಜನರು ನೋಡಿಕೊಳ್ಳುತ್ತಿದ್ದರು. ಬಕ್ ಟಗರಿನಂತೆ ಜೀವದ ಹಂಗುದೊರೆದು ಪ್ರವಾಹದಲ್ಲಿ ತನ್ನೆಡೆಗೆ ಬರುವದನ್ನು ನೋಡಿ ಅದರ ಕೂದಲುಳ್ಳ ಕುತ್ತಿಗೆಗೆ ಥಾರ್ಟನ್ ಕೈ ಹಾಕಿದನು. ನದಿಯಲ್ಲಿ ಬರುವಾಗ ನಾಯಿಗೂ ಥಾರ್ಟನ್ನನಿಗೂ ಉಸಿರು ಕಟ್ಟುತ್ತಿತ್ತು. ಕಲ್ಲಿಗೆ ಅಪ್ಪಳಿಸಬೇಕಾಗುತ್ತಿತ್ತು.

ಆಗ ಹಾನ್ಸ, ಪೇಟೆ ಇಬ್ಬರೂ ಕೂಡಿ ತೇಲುಬಿಟ್ಟ ಮುಂದಿಗೆ ಬಂದಿತು. ಮೊದಲು ಬಕ್‌ನ ಕಡೆಗೆ ಥಾರ್ಟನ್ನನ ಲಕ್ಷ್ಯಹೋಯಿತು. ದಂಡೆಗೆ ಬಂದಾಗ ಅದು ನಿರ್ಜೀವವಾದಂತಿತ್ತು. ನಿಗ್ ಕನಿಕರದಿಂದ ಒಂದೇ ಸವನೆ ಒದರುತ್ತಿತ್ತು. ಸ್ಕೀಟ ಅದರ ಕಣ್ಣು, ತೊಯ್ದ ಮುಖ ನೆಕ್ಕುತ್ತಿತ್ತು. ಥಾರ್ಟನ್ನನ ಮೈಯಲ್ಲಿ ಏನೂ ಉಳಿದಿರಲಿಲ್ಲ. ಬಕ್‌ನ ಮೂರು ಎಲವು ಸರಿದದ್ದು ತಿಳಿಯಿತು ಅವನಿಗೆ.

“ ಇಂದು ಇಲ್ಲಿಯೇ ನಮ್ಮ ಶಿಬಿರಕ್ಕೆ ವಿಶ್ರಾಂತಿ. ಬಕ್ ನಡೆಯು ವಂತಾದ ಮೇಲೆ ಮುಂದೆ ಪ್ರಯಾಣ ” ಎಂದ ಥಾರ್ಟನ್.

ಆ ಚಳಿಗಾಲ ಡಾಸನ್ನಿನಲ್ಲಿ ಬಕ್ ಮತ್ತೊಂದು ಸಾಹಸ ಕೃತಿ ಮಾಡಿ ತೋರಿಸಿತು. ಇದರಷ್ಟಲ್ಲ. ಆದರೂ ಆ ಸಾಹಸದ ಮೂಲಕ ಅದರ ಹೆಸರು ಚಿರಸ್ಥಾಯಿಯಾಯಿತು. ಮೂವರು ಜನರಿಗೆ ಮಾತ್ರ ಈ ಸಾಹಸ ಆನಂದ ಉಂಟುಮಾಡಿತು. ಎಲ್ಡೊರ್ರ್ಯಾಡೊ ಸಲೂನಿನಲ್ಲಿ ಒಮ್ಮೆ ಮಾತಿಗೆ ಕುಳಿತಾಗ ನಾಯಿಗಳ ಮಾತು ಹೊರಟಿತು ತಮ್ಮ ತಮ್ಮ ನಾಯಿಗಳ ‘ ತಾರೀಫು ’ ನಡೆ ಯಿತು. ಥಾರ್ಟನ್ನನೂ ತನ್ನ ಬಕ್‌ನ ಬಗ್ಗೆ ಮಾತನಾಡಿದ. ಅರ್ಧ ತಾಸಿನ ಚರ್ಚೆಯಾದ ನಂತರ ಒಬ್ಬ, ತನ್ನ ನಾಯಿ ಐದು ನೂರು ಪೌಂಡು ತೂಕದ ಕಲ್ಲು ತುಂಬಿದ ನಾವನ್ನು ಎಳೆಯಬಲ್ಲದೆಂದನು. ಎರಡನೆಯವ ಆರು ನೂರು ತೂಕದ್ದು ಎಂದ. ಮೂರನೆಯವ ಏಳು ನೂರಿನದೆಂದ.

“ ನಿಮ್ಮದೇನು ಡೌಲು ! ನಮ್ಮ ಬಕ್ ಸಾವಿರ ಪೌಂಡು ಎಳೆಯುವ ದೆ”ಂದು ಥಾರ್ಟನ್ನ ನುಡಿದ.

“ ಬರಿ ಎಳೆಯುವದೊ ? ಅಥವಾ ಮುಂದೆ ನೂರು ಯಾರ್ಡು ಹಾಗೆ ಹೋಗುವದೊ ? ” ಎಂದು ಮ್ಯಾಥ್ಯೂಸನ್ ಕೇಳಿದ.

ಶಾಂತಚಿತ್ತದಿಂದ ಥಾರ್ಟನ್ ನುಡಿದ—“ ನೂರು ಯಾರ್ಡು ಎಳೆಯು ವದು ಬಕ್.”

“ ನನ್ನ ಹತ್ತರ ನೂರು ಡಾಲರಿನ ಚೀಲವಿದೆ. ನನ್ನ ಮಾತು ಸುಳ್ಳಾ ದರೆ, ಇಕೊ ಕೊಟ್ಟುಬಿಡುವೆ ” ಎಂದು ಜಂಭದಿಂದ ಸಲಾಖಿಯ ಬಳಿ ಚಲ್ಲಿದ ಮ್ಯಾಥ್ಯೂಸನ್.

ಯಾರಿಂದಲೂ ಒಂದು ಚಕಾರ ಶಬ್ದ ಹೊರಡಲಿಲ್ಲ. ಎಲ್ಲರೂ ಥಾರ್ಟನ ನದು ಬರಿ ಬಡಾಯಿ ಎಂದರು. ಥಾರ್ಟನ್ ಬಾಯಿಯಲ್ಲಿ ನೀರೂರಿತು. “ ಆದರೂ ಬಕ್ ಇಂಥ ಸಾಹಸ ಮಾಡೀತೆ ? ” ಎಂದು ತನ್ನೊಳಗೆ ಪ್ರಶ್ನೆ ಹಾಕಿಕೊಂಡ. ಬಕ್‌ನ ಶಕ್ತಿಯ ವಿಷಯಕ್ಕೆ ಅವನಿಗೆ ಪೂರ್ಣ ಮನವರಿಕೆ ಯಾಗಿತ್ತು. ಇಂಥ ಒಜ್ಜೆ ಎಳೆದೀತೆಂದು ನಿರ್ಧರಿಸಿದ. ‘ ಹತ್ತು ಹನ್ನೆರಡು ಜನರು ಸುತ್ತುಗಟ್ಟಿ ನೋಡುತ್ತಾರೆ; ನಮ್ಮ ಮೂವರಲ್ಲಿ ಒಬ್ಬರ ಹತ್ತಿರವೂ ಸಾವಿರ ಡಾಲರ ಇಲ್ಲ; ಆದರೂ ಆಗಿಯೆ ಹೋಗಲಿ ’ ಎಂದ.

“ ನನ್ನ ಬಂಡಿಯಲ್ಲಿ ಸಾವಿರ ಪೌಂಡು ತೂಕದ ಚೀಲಗಳಿವೆ. ನಿಮ್ಮ ನಾಯಿ ಎಳೆಯಲಿ ನೋಡುವಾ ”—ಎಂದು ಮ್ಯಾಥ್ಯೂಸನ್ ಮತ್ತೆ ಆಹ್ವಾನಿಸಿದ.

ಥಾರ್ಟನ್ ಸುಮ್ಮನಿದ್ದ. ಏನು ಹೇಳಬೇಕೆಂಬುದು ಹೊಳೆಯಲಿಲ್ಲ. ತನ್ನ ವಿಚಾರಶಕ್ತಿ ಕುಂದಿ, ಹೊರಗಿನಿಂದ ಕಡ ತರಬೇಕಾದ ಸ್ಥಿತಿ ಅವನದಾಗಿತ್ತು. ಹಿಂದೆಂದೂ ಯಾರೂ ಮಾಡಲಾಗದ್ದನ್ನು ಮಾಡಿಯೇ ತೋರಿಸಬೇಕೆಂದು ಹವಣಿಸಿದ.

“ ನನಗೊಂದು ಸಾವಿರ ಸಾಲಕೊಡುವಿಯಾ ? ” ಎಂದು ಥಾರ್ಟನ್ ತನ್ನ ಗೆಳೆಯನೊಬ್ಬನಿಗೆ ಕಿವಿಮಾತು ಕೇಳಿದ.

‘ ಹೊ ! ’ ಎಂದು ಓಬ್ರಾಯಿನ್ ಸಾವಿರದ ಚೀಲ ಮ್ಯಾಥ್ಯೂಸನ್ನಿನ ಚೀಲದ ಬಳಿಯಲ್ಲಿಟ್ಟ.

ಈ ಸತ್ವ ಪರೀಕ್ಷೆ ಕಣ್ಣಾರೆ ನೋಡಬೇಕೆಂಬ ಕುತೂಹಲದಿಂದ ಪ್ರೇರಿತವಾಗಿ ಎಲ್ಡೊರ್ಯಾಡೊ ನಗರಕ್ಕೆ ನಗರವೇ ಅಲ್ಲಿಗೆ ಬಂದಿತು.

ವ್ಯಾಪಾರಸ್ಥರು ಆಟಗಾರರು ತಮ್ಮ ಕೆಲಸ ಬಿಟ್ಟುಕೊಟ್ಟು ಮೋಜು ನೋಡಲು ಬಂದರು. ಜೂಜು ನೋಡಬೇಕೆಂದು ಜನ ಬಂಡಿಯನ್ನು ಸುತ್ತುಗಟ್ಟಿ ನಿಂತಿತು. ಮ್ಯಾಥ್ಯೂಸನ್ನನ ಬಂಡಿ ಹಿಮದಲ್ಲಿ ಒಳಸಿಕ್ಕು ಎರಡು ತಾಸಾಗಿತ್ತು. ಬಕ್ ಇಂತಹ ಭಾರ ಎಳೆಯಲಾರದೆಂದು ಅರ್ಧಕ್ಕರ್ಧ ಜನ ಮಾತಾಡಿಕೊಳ್ಳುತ್ತಿದ್ದರು. ಮೊದಲು ಅದನ್ನು ಹಿಮದೊಳಗಿಂದ ಎಳಿಸುವದು ಮ್ಯಾಥ್ಯೂಸನ್ನಿನ ಕರಾರಿನಲ್ಲಿರಲಿಲ್ಲವಂತೆ ! ಇಂತಹದನ್ನು ಹಿಮದಿಂದೆಬ್ಬಿಸಿ ಹೊರಗೆ ಬಂದೊಡನೆ, ಸಾವಿರ ಪೌಂಡಿನ ತೂಕದ ಚೀಲ ಎಳೆದೀತೆ ಬಕ್ ? ಎಂದು ಥಾರ್ಟನ್ ವಿವಂಚನೆಗೊಳಗಾದ.

“ ಹಿಮದೊಳಗಿಂದಲೆ ಬಕ್ ಎಳೆದರೆ ಇನ್ನೊಂದು ಸಾವಿರ ತೆಗೆದುಕೊ ” ಎಂದು ಮ್ಯಾಥ್ಯೂಸನ್ ಉತ್ಸಾಹಭರಿತನಾಗಿ ನುಡಿದ.

ಮುಖದ ಮೇಲೆ ಸಂಶಯದ ಕಳೆ ಇದ್ದರೂ ಥಾರ್ಟನ್ನನ ಅಂತರಂಗದಲ್ಲಿ ಮಹತ್ವಾಕಾಂಕ್ಷೆ ಇದ್ದಿತು. ಹೋರಾಟವೆಂದರೆ ಅವನಿಗೆ ಬಲು ಮೆಚ್ಚು. ಹ್ಯಾನ್ಸ್, ಪೇಟ್ ಇಬ್ಬರನ್ನು ತನ್ನ ಬಳಿಗೆ ಕರೆದ. ಅವರಲ್ಲಿ ಬಹಳ ಹಣ ಆಗ ಸಿಗದಿದ್ದರೂ ಒಟ್ಟು ಎರಡು ನೂರು ಡಾಲರ್ ಸಿಕ್ಕವು. ಇಷ್ಟೆ ಅವರ ಬಂಡವಲು.

ಮ್ಯಾಥ್ಯೂಸನ್ನನ ಆರು ನೂರಕ್ಕೆ (ಒಂದಕ್ಕೆ ಮೂರರಂತೆ !) ಹಿಂದು ಮುಂದು ನೋಡದೆ ಪಣ ಒಡ್ಡಿದರು ಕೊನೆಗೆ !

ಹತ್ತು ನಾಯಿಗಳನ್ನು ಬಿಚ್ಚಿದರು. ಬಂಡಿಗೆ ಥಾರ್ಟನ್ನನ ಜೀನನ್ನೇ ಉಪಯೋಗಿಸಿದರು. ಜಾನ್ ಥಾರ್ಟನ್ನನಿಗಾಗಿ ತನಗೆ ಸಾಧ್ಯವಾದುದನ್ನೆಲ್ಲ ಮಾಡಲೇಬೇಕೆಂದು ಬಕ್ ನಿರ್ಧರಿಸಿತು. ಅದರ ರಾಜಠೀವಿಗಾಗಿ ಜನ ತಮ್ಮ ತಮ್ಮೊಳಗೆ ಮಾತಾಡಿಕೊಳ್ಳಲಾರಂಭಿಸಿದರು. ಮೈಯಲ್ಲಿ ಎಷ್ಟೂ ಬೊಜ್ಜು ಇಲ್ಲ. ಒಳ್ಳೇ ಆರೋಗ್ಯದ ಸ್ಥಿತಿ ಬಕ್‌ನಿಗೆ. ನೂರಾ ಐವತ್ತು ಪೌಂಡು ತೂಕ. ಅದರ ಮೈ ಕೂದಲಿಗೆ ರೇಶಿಮೆಯಂಥ ಹೊಳಪು. ಕೊರಳು, ಹೆಗಲು ಅದರ ಸಾಮರ್ಥ್ಯದ ಪ್ರತೀಕವೆನ್ನುವಷ್ಟು ಪ್ರಮಾಣಬದ್ಧ. ಸ್ನಾಯುಗಳು ಅಷ್ಟೇ ಬಲಶಾಲಿ ! ಕಬ್ಬಿಣದಂತೆ ಬಿರುಸು !

ಸ್ಕೂಕಂ ಬೆಂಚ ಅರಸು ನುಡಿದ: "ಈ ಪ್ರಯೋಗ ನಡೆಯುವ ಮೊದಲೇ ಬಕ್‌ನನ್ನು ನನಗೆ ಎಂಟು ನೂರು ಡಾಲರಿಗೆ ಮಾರಿಬಿಡಿರಿ."

ಥಾರ್ಟನ್ನನು ಅದನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. ಅದರ ಬಳಿ ನಿಂತ.

"ಯೋಗ್ಯ ನಿರ್ಣಯವಾಗಬೇಕಾದರೆ ನೀನು ದೂರ ಸರಿದು ನಿಲ್ಲು." ಎಂದ ಥಾರ್ಟನ್ನ ನನ್ನುದ್ದೇಶಿಸಿ ಮ್ಯಾಥ್ಯೂಸನ್ ಹೇಳಿದ.

ಜನ ಸಂಮರ್ದದಲ್ಲಿ ನೀರವ; ಜೋರೆ ಜೂಜುಗಾರರ ಜೂಜಿನ ದನಿ ಯಷ್ಟೇ. ಬಕ್ ಭವ್ಯ ಪ್ರಾಣಿ ಎಂದು ಎಲ್ಲರೂ ಒಕ್ಕೊರಲಿನಿಂದ ಅನ್ನುವವರೆ ! ಆದರೇನು ? ಸಾವಿರ ಪೌಂಡಿನ ತೂಕ ಎಳೆಯಲಾರದೆಂದು ನುಡುಕಿದವರು ಬಹಳ !

ಥಾರ್ಟನ್ ಬಕ್‌ನ ಬಳಿಯಲ್ಲಿ ಮೊಣಕಾಲೂರಿ ಕುಳಿತ. ಅದರ ತಲೆ ಯನ್ನು ಕೈಯ್ಯಲ್ಲಿ ತೆಗೆದುಕೊಂಡ. ಗಲ್ಲಕ್ಕೆ ಗಲ್ಲ ಹಚ್ಚಿದ. ವಿನೋದಕ್ಕಾಗಿ ಅದನ್ನು ಅಲ್ಲಿಸಲಿಲ್ಲ. ಅಚ್ಚಿಯ ಬೈಗಳನ್ನೂ ಬೈಯಲಿಲ್ಲ. ಆದರೆ ಕಿವಿಮಾತು ಉಸುರಿದ—"ನೀನು ನನ್ನನ್ನು ಪ್ರೀತಿಸುತ್ತೀ ಬಕ್,—ನೋಡಿಕೋ, ನೋಡಿಕೊ." ಅದುಮಿಟ್ಟ ಆತುರತೆಯಲ್ಲಿ ಕರುಣೆ ವ್ಯಕ್ತಗೊಂಡಿತು.

ಜನ ಕುತೂಹಲದಿಂದ ನಿರೀಕ್ಷಿಸುತ್ತಿತ್ತು. ಈ ವ್ಯವಹಾರ ರಹಸ್ಯ ಮಯವಾಗುತ್ತ ನಡೆಯಿತು. ಇದೊಂದು ಜಾದು ಎನಿಸಿರಬೇಕು. ಥಾರ್ಟನ್

ಏಳುವಾಗ ಬಕ್ ಅವನ ಕೈಯನ್ನು ಪ್ರೀತಿಯಿಂದ ಹಲ್ಲುಗಳಲ್ಲಿ ಹಿಡಿಯಿತು. ತೀವ್ರ ಬಿಡಲಿಲ್ಲ. ಜುಲುಮೆಯಿಂದ ಕೊನೆಗೆ ಬಿಟ್ಟಿತು. ಅದು ಪ್ರೀತಿಯ ಸಂಕೇತ—ಮಾತಿಲ್ಲದ ಮೂಲಕ! ಥಾರ್ಟನ್ ಹಿಂದಕ್ಕೆ ಸರಿದ. ದೂರ ಸರಿದ.

'ಬಕ್ ಈಗ!....' ಅವನೆಂದ.

ಬಕ್ ಹೆಜ್ಜೆಯ ಲೆಕ್ಕ ನೋಡಿತು. ಅಳವಿನ ಜ್ಞಾನ ಅದಕ್ಕಿತ್ತು.

ರಾವು-ರಾವಾದ ಆ ಸ್ತಬ್ಧವಾತಾವರಣದಲ್ಲಿ ಥಾರ್ಟನ್ನನ ಧ್ವನಿ 'ಗೀ' ಎಂದು ಕಂಚಿನಂತೆ ಹೊರಟಿತು.

ಬಕ್ ಬಲಕ್ಕೆ ತಿರುಗಿ, ಮುನ್ನುಗ್ಗಿ, ಚೀಲಗಳಿಗೆ 'ಧಡಕಿ' ಕೊಟ್ಟಿತು. ತನ್ನ ನೂರಾ ಐವತ್ತು ಪೌಂಡಿನ ತೂಕದ ಕರಾಮತ್ತು ಕ್ಷಣದಲ್ಲಿ ತೋರಿತು. ಭಾರ ಹೊಯ್ದಾಡಿತು.

'ಹಾ!' ಎಂದು ಥಾರ್ಟನ್ ಆಜ್ಞೆಗೈದ.

ಈಗ ಬಕ್ ಹಿಂದಿನಂತೆಯೆ ಎಡಕ್ಕೆ ತನ್ನ ಪ್ರಯೋಗ ನಡೆಸಿತು. ಕರ್ ಕರ್ ಎಂದು ಬಂಡಿಯ ಕೆಳಗೆ ಸಪ್ಪಳವಾಯಿತು. ಬಂಡಿ ಎಷ್ಟೋ ಇಂಚು ಬದಿಗೆ ಸರಿಯಿತು; ಕಿತ್ತಿ ಮುಂದು ಬಂದಿತು. ಇದನ್ನೆಲ್ಲ ಕಣ್ಣಾರೆ ಕಂಡ ಜನ ಗೊಂಬೆಯಂತೆ ಪ್ರಜ್ಞಾಶೂನ್ಯವಾಗಿ ಕುಳಿತಿತ್ತು.

"ಮಶ್, ಬಕ್".

ಥಾರ್ಟನ್ನನ ಆಜ್ಞೆ ರಿವಾಲ್ವರಿನ ಗುಂಡಿನ ಧ್ವನಿಯಂತೆ! ಬಕ್ ಮುಂದಕ್ಕೆ ಝೋಲಿ ಹೊಡೆದು ಕಾಲು ಸರಿಪಡಿಸಿಕೊಂಡಿತು. ಇಡೀ ದೇಹದ ಶಕ್ತಿ ಕೇಂದ್ರೀಕೃತವಾಯ್ತು. ರೇಶಿಮೆಯ ತುಪ್ಪಳದ ಕೆಳಗಿನ ಸ್ನಾಯುಗಳು ಮುರಿಗಿಗಟ್ಟಿ ಚುರುಕಾದವು. ಅದರ ಎದೆ ನೆಲಕ್ಕೇ ಹತ್ತಿತು. ತಲೆ ಕೆಳಗೆ ಮೇಲೆ ಆಗುತ್ತಿತ್ತು. ಕಾಲು ಆವೇಶದಲ್ಲಿ ಹಾರಾಡುತ್ತಿದ್ದವು. ಬಂಡಿ ಹೊಯ್ದಾಡಿ ಅರ್ಧ ತಳ ಕಿತ್ತಿತು. ಅದರ ಒಂದು ಕಾಲು ಜಾರಿದಾಗ ಒಬ್ಬ ಅಯ್ಯೋ ಎಂದು ಚೀರಿದ. ಒಂದರಿಂದೊಂದರಂತೆ ಧಡಕಿಗೆ ಸಿಕ್ಕು ಬಂಡಿ ಹೊರಟಿತು—ಅರ್ಧ ಇಂಚು, ಇಂಚು, ಎರಡು ಇಂಚು! ಮುಂದೆ ಕ್ರಮೇಣ ಹೊಯ್ದಾಟವಿಲ್ಲದೆ ಸಾಗಿತು...

ಜನರು ಉಸಿರು ಬಿಗಿಹಿಡಿದು ಮತ್ತೆ ಉಸಿರಾಡಿಸತೊಡಗಿದರು. ಹುರುಪು ಹುಟ್ಟಿಸುವ ಮಾತನ್ನಾಡುತ್ತ ಥಾರ್ಟನ್ ನಾಯಿಯ ಹಿಂದೆಯೇ ಇದ್ದ. ಸಿಕ್ಷಿತ ಅಂತರ ದಾಟಿದ ಮೇಲೆ ಕೂಡಿದ ಮಂದಿ ' ಹೆ ಹೊ ' ಎಂದು ಕೇಕೆ ಹಾಕಹತ್ತಿದರು. ಪ್ರತಿಯೊಬ್ಬನೂ,—ಮ್ಯಾಥ್ಯೂಸನ್ನ ಸಹ—ಹರ್ಷಾ ವಿಷ್ಟನಾಗಿದ್ದ. ಟೊಪ್ಪಿಗೆಗಳು ಗಾಳಿಯಲ್ಲಿ ತೂರಾಡಲ್ಪಟ್ಟವು. ಜನರು ಕೈ ಕುಲುಕಿಸಿದರು. ಯಾರೊಡನೆ ಎಂಬ ಪ್ರಶ್ನೆಯೇ ಏಳಲಿಲ್ಲ. ಎಂತಹ ಉನ್ಮಾದ !

ಆದರೆ ಥಾರ್ಟನ್ ಬಕ್ಕನ ಸನ್ನಿಧಿ ಬಿಡಲಿಲ್ಲ. ಕಾಲ ಬಳಿ ಕುಳಿತ. ಅದರ ಕಾಲು ಕೈ ತಿಕ್ಕುತ್ತಿದ್ದ. ಅಚ್ಚೆಯಿಂದ ಬೈದಾಡಿದ.

ಸ್ಕ್ರಾಕಂ ಬೆಂಚ ಅರಸು ನುಡಿದ—" ಸಾವಿರ, ಹನ್ನೆರಡುನೂರು ಕೊಡುವೆ ಅದಕ್ಕಾಗಿ. ಒಪ್ಪಿಗೆಯೆ ? "

ಥಾರ್ಟನ್ ಮೇಲಕ್ಕೆದ್ದ. ಕಣ್ಣು ಒದ್ದೆಯಾಗಿದ್ದವು. ಹಾಗೆ ಇಳಿಯುತ್ತ ಕಂಬನಿ ಗಲ್ಲಕ್ಕೆ ಬಂದಿತು. " ಅದರ ವಿಷಯ ಎತ್ತಬೇಡಿರಿ "—ಎಂದು ನುಡಿದ ಥಾರ್ಟನ್.

ಬಕ್ ಥಾರ್ಟನ್ನನ ಕೈಯನ್ನು ತನ್ನ ಹಲ್ಲಿನಲ್ಲಿ ಹಿಡಿಯಿತು. ಥಾರ್ಟನ್ ಅದನ್ನು ಅಲುಗಾಡಿಸಿದ. ನಿರೀಕ್ಷಕರೂ ಆತ್ಮೀಯತೆಯಿಂದ ಹಿಂದಕ್ಕೆ ಸರಿದರು. ಇಬ್ಬರ ನಡುವೆ ಬರಲಿಲ್ಲ.



## ೭. ಕರೆಯ ಮುನ್ಸೂಚನೆ

ಐದು ನಿಮಿಷಗಳಲ್ಲಿ ಬಕ್ ಜಾನನಿಗಾಗಿ ಹದಿನಾರು ನೂರು ಡಾಲರ್ ಗಳಿಸಿಕೊಟ್ಟಾಗ, ಅವನ ಎಷ್ಟೋ ಸಾಲಗಳು ಹರಿದವು. ಪೂರ್ವದಲ್ಲಿಯ ಕಣಿಗಳಿಗೆ ಪಾಲುಗಾರಿಕೆಯಿಂದ ಹೋಗಲು ಅನುವು ಆಯಿತು. ಅಸಂಖ್ಯಾತ ಜನರು ಇದಕ್ಕಾಗಿ ಹಂಬಲಿಸಿದ್ದರು, ಹುಡುಕಿದ್ದರು. ಈ ಭಾಗ್ಯ ಕೆಲವರದೇ ಸೊತ್ತಾಗಿತ್ತು. ಈ ಸುವರ್ಣಶೋಧಕ್ಕಾಗಿ ಹೊರಟು ಹಲವರಂತೂ ದುರ್ದೈವದಿಂದ ಮರಳಲೇ ಇಲ್ಲ. ಸಿಗದೇ ಇದ್ದ ಕಣಿಯ ವಿಷಯಕ್ಕೆ ರಹಸ್ಯವೇ ಹೆಚ್ಚುತ್ತಿತ್ತು. ಮೊದಲು ಶೋಧಿಸಿದವನ ಹೆಸರು ಯಾರಿಗೂ ತಿಳಿದಿರಲಿಲ್ಲ.

ಜೀವದಿಂದುಳಿದ ಯಾವನಾದರೊಬ್ಬನು ಕೂಡ ಈ ಸಿಧಿಯನ್ನು ಸೂರೆಗೈಯ್ಯಲಿಲ್ಲ. ಸತ್ತವರು ಸತ್ತೇಹೋದರು. ಅಲ್ಲಿಗೇ ಈಗ ಈ ಪರಿವಾರ ಹೊರಟದ್ದು—ಹಿಂದಿನವರಂತೆ. ಯುಕನ್ನಿನ ವರೆಗೆ ಅವರು ಬಂಡಿಯಲ್ಲಿ ಹೋದರು. ಇಪ್ಪತ್ತು ಮೈಲು ಆದೀತು. ಮುಂದೆ ಸ್ಟೆವರ್ಟ ನದಿ ಹತ್ತಿತು. ಆ ಭೂಖಂಡದ ಬೆನ್ನೆಲುಬಿನಂತಿದ್ದ ಪರ್ವತ ಶಿಖರಗಳೆಡೆಗೆ ಬಂದರು.

ಥಾರ್ಟನ್ ನಿಸರ್ಗ ಹಾಗೂ ಮನುಷ್ಯನ ಮಾತನ್ನೆ ಎತ್ತಲಿಲ್ಲ. ಕಾಡು ಎಂದರೆ ಅವನಿಗೇನೂ ಹೆದರಿಕೆ ಅನಿಸುತ್ತಿರಲಿಲ್ಲ. ತುಸು ಆಹಾರ, ಒಂದು ರಿವ್ಹಾಲ್ವರ ಸಾಕು ಅವನಿಗೆ—ಕಾನನದಲ್ಲಿ ಮುನ್ನುಗ್ಗಲು! ಭಾರತೀಯರ ಧರ್ತಿಯಲ್ಲಿ ಅವನ ಜೀವನದಲ್ಲಿ ರಭಸಕ್ಕೆ ಎಡೆ ಇರಲಿಲ್ಲ. ದಿನದ ಆಹಾರವನ್ನು ನಿರಾಯಾಸವಾಗಿ ಪ್ರವಾಸದಲ್ಲಿಯೆ ದೊರಕಿಸುತ್ತಿದ್ದ. ಅದೆ ಭಾರತೀಯನಂತೆ, ಮತ್ತೆ ಅದು ದೊರೆಯದಿದ್ದರೆ ಹಾಗೇ ಅಡವಿಯಲ್ಲಿ ಸಾಗುತ್ತಿದ್ದ. ಮುಂದೆ ಸಾಗಬಹುದು ಎಂಬ ವಿಶ್ವಾಸ ಅವನಿಗೆ! ಅವನ ಸಾಮಗ್ರಿ ಎಂದರೆ ಅಂತೇ ಮದ್ದು–ಗುಂಡು.

ಈ ವಿಲಕ್ಷಣ ಪ್ರದೇಶವಲ್ಲಿ ತಿರುಗಾಡಿ ಬೇಟೆಯಾಡುತ್ತಿರುವದು, ಮೀನು ಹಿಡಿಯುವದು ಎಂದರೆ ಬಕ್‌ಸಿಗೆ ಅತಿ ಮೆಚ್ಚಿನದು. ಒಮ್ಮೊಮ್ಮೆ ಹಲವು ವಾರ ಅವರು ಹಾಗೇ ಕ್ರಮಿಸುವರು. ಹಲವು ವಾರ ವಿರಾಮ. ನಾಯಿಗಳು ಆಗ ಅಲೆದಾಡುತ್ತಿದ್ದವು. ಜನರು ಕಾಸಿಕೊಳ್ಳುತ್ತಿದ್ದರು.— ಒಮದಲ್ಲಿ ತೂತು ಕೊರೆದು ಪಾತ್ರೆ ತೊಳೆಯುತ್ತಿದ್ದರು. ಒಮ್ಮೊಮ್ಮೆ ಉಪ ವಾಸ ಬೀಳಬೇಕಾಗುತ್ತಿತ್ತು. ಕೆಲವು ಸಲ ಸಮೀಚೀನ ಊಟ—ಎಲ್ಲ ದೈವೇಚ್ಛೆಯಂತೆ ! ಬೇಸಿಗೆ ಬಂದಿತು. ಜನರು, ನಾಯಿ ಒಜ್ಜೆ ಹೊತ್ತು ಕೊಂಡು ದೋಣಿ ಹಿಡಿದು ಪರ್ವತಗಳಾಚೆಗಿನ ನೀಲಿಮಾಮಯ ಸರೋವರ, ಹೆಸರು ತಿಳಿಯದಿದ್ದ ನದ ನದಿ ದಾಟುತ್ತಿದ್ದರು.

ತಿಂಗಳುಗಳು ಬಂದವು; ಹೋದವು. ಅನಂತತೆಯ ವ್ಯಾಪ್ತಿಯಲ್ಲಿ ಒಂದಾಗುವುಂದಾದವು. ಸತ್ತದ್ದು ನಿಜವಿದ್ದರೆ ಅಲ್ಲಿ ಮೊದಲು ಜನರ ಸುಳು ವಿದ್ದಿರಲು ಸಾಕು. ಒಮದ ಬಿರುಗಾಳಿಯಲ್ಲಿ ಹಾಗೇ ಸಾಗಿದರು. ಮಧ್ಯ ರಾತ್ರಿಯ ಸೂರ್ಯನ ಛಾಯೆಯಲ್ಲಿ ಕಟ ಕಟ ನಡುಗಿದರು. ಕೊಳ್ಳ, ಘಟ್ಟ, ಒಮನದಿಗಳನ್ನು ದಾಟಿ ಹೂ ಹಣ್ಣು ಕಾಯಿಗಳನ್ನು ಕೂಡಿಸುತ್ತ ನಡೆದರು. ಮಾರ್ಗದಲ್ಲಿ ವಿಚಿತ್ರ ಸರೋವರ ಪ್ರದೇಶ ಹತ್ತಿತು. ಅಲ್ಲಿ ಕುಳಿರ್ಗಾಳಿ, ಹಿಮ, ಅಲೆಗಳ ಬಡಿತ, ಏಕಾಂತ ತೀರಗಳ ಹೊರತಾಗಿ ಏನೂ ಇರಲಿಲ್ಲ. ಮನುಷ್ಯ ಜೀವನದ ಕುರುಹಿನ ಸುಳಿವೇ ಹತ್ತಲಿಲ್ಲ.

ಮತ್ತೊಂದು ಚಳಿಗಾಲ ಅವರು ಮೊದಲು ಕ್ರಮಿಸಿದವರ ಹೆಜ್ಜೆಯಲ್ಲಿ ನಡೆದರು. ಹಳೆಯ ಸೀಳು ದಾರಿಯವು. ಮುಗಿಯುವದೆಲ್ಲಿ, ಪ್ರಾರಂಭವೆಲ್ಲಿ —ಹೊಳೆಯುತ್ತಿರಲಿಲ್ಲ. ಈ ದಾರಿಗಳಾದರೂ ನಿರ್ಮಿತವಾದುವೇಕೆ, ಹೇಗೆ- ಎಂಬದೂ ಗೂಢವೇ. ಬೇಟೆಯ ಪ್ರದೇಶದಲ್ಲಿ ಥಾರ್ಟನ್ನನಿಗೆ ಒಂದು ತುಬಾಕಿ ಸಿಕ್ಕಿತು. ಯಾರೋ ಮುಂದೆ ಕ್ರಮಿಸುವಾಗ ಮರೆತಿರಬೇಕು.

ಇದೀಗ ಇನ್ನೊಂದು ವಸಂತ ಋತು. ತಮ್ಮ ಅಲೆದಾಟದ ಕೊನೆ ಗೊಮ್ಮೆ ಒಂದು ಕೊಳ್ಳಕ್ಕೆ ಬಂದರು ಸಂಶೋಧಕರು. ಹಳದಿ ಬೆಣ್ಣೆಯಂತಹ ನೆಲ ಅದು. ಮುಂದೆ ಅವರು ಹೋಗಲಿಲ್ಲ. ಅಲ್ಲಿಯ ಉಸುಕನ್ನೇ ಸ್ವಚ್ಛ ಮಾಡಿದರು. ಬಂಗಾರವನ್ನು ತೊಗಲಿನ ಚೀಲಗಳಲ್ಲಿ ತುಂಬಿದರು—ಕಟ್ಟೆ

ಗೆಯ ಪುಡಿಯಂತೆ ! ರಾಕ್ಷಸರಂತೆ ದಾಳಿ ತುಳಿವರು. ಕನಸು ನನಸಾಯಿತು. ಬಂಗಾರ ರಾಶಿಯಾಗಿ ಸಿಕ್ಕಿತು.

ಥಾರ್ಟನ್ನನು ಕೊಂದ ಪ್ರಾಣಿಗಳನ್ನು ಹೊತ್ತುಕೊಂಡು ಹೋಗುವವು ನಾಯಿಗಳ ಕೆಲಸವೀಗ. ಬಕ್ ಬೆಂಕಿಯ ಬಳಿ ಬಹುಕಾಲ ಕೂಡುವವು— ವಿಚಾರಮಗ್ನವಾಗಿ. ಕಿರುಗಾಲಿನ, ಕೂದಲಿನ ಮನುಷ್ಯ ಒಮ್ಮೊಮ್ಮೆ ಅವರ ಮನೋಭಿತ್ತಿಯಲ್ಲಿ ಮೂಡಿಹೋಗುವನು. ಈಗ ಕೆಲಸವೇ ಇಲ್ಲದ್ದರಿಂದ ಬಕ್ ಬೆಂಕಿಯನ್ನು ನಿಟ್ಟಿಸುತ್ತ ಕೂಡುತ್ತಿತ್ತು. ಯಾವುದೊ ಒಂದು ಅಜ್ಞಾತ ಲೋಕದಲ್ಲಿ ಅದರ ಸಂಚಾರ !

ಈ ಬೇರೆ ಪ್ರಪಂಚದ ಮುಖ್ಯ ಲಕ್ಷಣ ಹೆದರಿಕೆಯೇ ಇರಬೇಕು. ಆ ಕೂದಲಿನ ಮನುಷ್ಯ ಬೆಂಕಿಯ ಬಳಿಯಲ್ಲಿ ಮಲಗಿದಾಗ ಒಮ್ಮಿಂದೊಮ್ಮೆಲೆ ಎಚ್ಚತ್ತು ಹೆದರಿ ಕತ್ತಲೆಯೆಡೆಗೆ ದಿಟ್ಟಿಸಿನೋಡುತ್ತಿದ್ದ. ಇಬ್ಬರೂ ಕೂಡಿ ಸಮುದ್ರದ ನಂಡೆಗೆ ಹೋಗುತ್ತಿದ್ದರು. ಅಲ್ಲಿ ಅವನು ಮೀನು ಹುಡುಕಿ ತಿನ್ನುತ್ತಿದ್ದ. ಕೂದಲಿನ ಮನುಷ್ಯನ ಹಿಂದೆಯೇ ಬಕ್. ಈರ್ವರೂ ಅಡವಿ ಯಲ್ಲಿ ಮೆಲ್ಲಗೆ ಬೆಕ್ಕಿನಂತೆ ಓಡುತ್ತಿದ್ದರು. ಬಕ್‌ನಷ್ಟೇ ಅವನ ಇಂದ್ರಿಯಗಳೂ ಚುರುಕು. ಗಿಡದಿಂದ ಗಿಡಕ್ಕೆ ಅವನು ಹಾರುತ್ತಿದ್ದ. ಕೈಬಿಟ್ಟು ಮತ್ತೆ ಟೊಂಗೆ ಹಿಡಿಯುತ್ತಿದ್ದೆ.

ಈ ಕೂದಲಿನ ಮನುಷ್ಯನ ಸಖ್ಯದಂತೆ ಕಾಡಿನ ಕರೆಯೂ ಬಕ್‌ನ ದೃಷ್ಟಿಯಲ್ಲಿ ಮಹತ್ವದ್ದಾಗಿತ್ತು- ಅದರ ಮನಸ್ಸಿನಲ್ಲಿ ಅಶಾಂತತೆ, ಉಂಟಾಗು ತ್ತಿತ್ತು. ಈ ಕಾಡಿನ ಕರೆ ನಿಜವೂ ಏನೊ ಎಂಬಂತೆ ಒಂದೊಂದು ದಿಸೆಯಲ್ಲಿ ಅದು ಕಾಡಿನಲ್ಲಿ ಬೊಗಳುತ್ತ ಹೊರಡುತ್ತಿತ್ತು. ಗಂಧವತೀ ಪೃಥಿವಿಗೆ ಮುಗ್ಧ ವಾಗಿ, ಹುಲ್ಲುಗಾವಲದಲ್ಲಿ, ಗಿಡಗಂಟೆಗಳಲ್ಲಿ ಅದು ಮೂಸಿನೋಡುತ್ತಲೇ ಇರುತ್ತಿತ್ತು. ಕಾಡಿನ ಸಕಲ ವ್ಯಾಪಾರದಲ್ಲಿಯೂ ಅದು ತಲ್ಲೀನವಾಗಿ ಆ ಕರೆಯ ರಹಸ್ಯ ತಿಳಿಯಲು ತವಕಿಸುತ್ತಿತ್ತು.

ಅದಕ್ಕೆ ಅಲೌಕಿಕ ಪ್ರೇರಣೆಯುಂಟಾಗುತ್ತಿತ್ತು. ಶಿಬಿರದಲ್ಲಿ ಬೇಜಾರ ದಿಂದ ತೂಕಡಿಸುತ್ತಿರುವಾಗ ಒಮ್ಮೆಲೆ ತಲೆ ಎತ್ತುತ್ತಿತ್ತು. ಕಿವಿ ನಿಮಿರುತ್ತಿದ್ದವು. ಏನೊ ಕೇಳಿದಂತೆ ಹಾರಬಿದ್ದು ಸರ್ರನೆ ಓಡುತ್ತಿತ್ತು. ಎಷ್ಟೊ ತಾಸು ಅದರ ಸುದ್ದಿ ಇಲ್ಲ ! ಅದು ನದಿಯ ಪ್ರವಾಹ ನಿರೀಕ್ಷಿಸುತ್ತಿತ್ತು. ಕದ್ದು ಕದ್ದು

ಪಕ್ಷಿ ಜೀವನವನ್ನು ಸಿರುಕಿಸುತ್ತಿತ್ತು. ದಿವಸದ ಕೆಲವೊಂದು ಭಾಗ ಅದು ಗಿಡವಡಿಯಲ್ಲಿ ಕುಳಿತು ತಿತ್ತಿರಿ ಪಕ್ಷಿಗಳ ಆಟ, ಹರಿದಾಟ ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿತ್ತು. ಬೇಸಿಗೆಯ ಮಧ್ಯರಾತ್ರಿಯ ಹೊಬಿಸಿಲಿನಲ್ಲಿ ಅಲೆದಾಡುವ ದೆಂಪರೆ ಅದಕ್ಕೆ ವಿಶೇಷ ಪ್ರೀತಿ. ಕಾಡಿನ ಸಂಜ್ಞೆ ಧ್ವನಿಗಳನ್ನು ಪುಸ್ತಕದಿಂದ ಓದಿ ತಿಳಿದುಕೊಂಡಂತೆ ಅದು ಅಭ್ಯಸಿಸುತ್ತಿತ್ತು.

ಒಂದು ಇರುಳು ಅದು ಎಚ್ಚತ್ತು ಅತಿ ಉತ್ಸಾಹಭರಿತವಾಗಿ ಆತುರತೆಯಲ್ಲಿ ಕಣ್ಣರಳಿಸಿ, ಮೂಗಿನ ಹೊರಳೆ ಉಬ್ಬಿಸಿ, ನಡುಗುತ್ತ, ವಾಸನೆ ನೋಡುತ್ತ, ಹೊರಟಿತು. ಕಾಡಿನಿಂದ ಕರೆ ಬಂದಿರಬೇಕು ! ಹಸ್ಕಿ ನಾಯಿಯ ಧ್ವನಿಯಲ್ಲ ಅದು. ಅಪೂರ್ವವಾದ, ಅನಂತಕಾಲದವರೆಗಿನ ಧ್ವನಿ ! ಬಕ್‌ಗೆ ಅದರ ಪರಿಚಯ ಅಸ್ಪಷ್ಟವಾಯಿತು. ಏನೂ ಸಪ್ಪು ಮಾಡದೆ ಶಿಬಿರದಿಂದ ಹಾರಿತು. ಒಂದು ಬಯಲು ಪ್ರದೇಶಕ್ಕೆ ತಲುಪಿತು—ಧ್ವನಿಯನ್ನಾಲಿಸುತ್ತ. ದೂರದಲ್ಲಿ ತೋಳ ಕಣ್ಣಿಗೆ ಬಿದ್ದಿತು.

ಅದೇನು ಒದರಿದ್ದಿಲ್ಲ. ಆದರೆ ಬಕ್ ಗುರುತಿಸಿತು. ಶರೀರವನ್ನೆಲ್ಲ ಆಕುಂಚಿಸಿ, ಅಂಬೆಗಾಲಿಡುತ್ತ, ಬಾಲವನ್ನೆತ್ತಿ ಮುಂದುವರಿಯಿತು. ಪ್ರತಿಕ್ಷಣ ಹೆದರಿಕೆಯದು. ಆದರೆ ತೋಳ ಇದನ್ನು ನೋಡಿ ಪಲಾಯನ ಹೇಳಿತು. ಅದನ್ನು ಹಿಡಿಯಲೆಂದು ಬಕ್ ಚಿಗರಿಯಂತೆ ಹಾರಿತು. ನಡುವೆ ಒಂದು ಮುಂಡಿಗೆ ಅಡ್ಡಬಂದಿತು. ತೋಳ ಗಿರ್ರನೆ ತಿರುಗಿ, ಹಲ್ಲು ಕಡಿಯುತ್ತ ಬದಿಗೆ ಸರಿಯಿತು.

ಬಕ್ ಅದರ ಮೇಲೆ ಏರಿಹೋಗಲಿಲ್ಲ. ಗೆಳೆತನದಿಂದ ಬಳಿಗೆ ಹೋಯಿತು. ತೋಳಕ್ಕೆ ಸಂಶಯ ಉಂಟಾಗಿ ಹೆದರಿತು. ಬಕ್‌ನ ತೂಕ ಮೂರು ಪಟ್ಟು. ತೋಳನ ತಲೆ ನಾಯಿಯ ಹೆಗಲಿಗೆ ಬರುತ್ತಿತ್ತು. ಅಂತೇ ತಪ್ಪಿಸಿಕೊಳ್ಳಲು ಹವಣಿಸಿತು. ಬೇಟೆ ಇಷ್ಟಕ್ಕೆ ನಿಲ್ಲಲಿಲ್ಲ. ಮೇಲಿಂದ ಮೇಲೆ ಬಲೆ ಹಾಕಿದಂತೆ ಮಾಡಿತು.

ಕೊನೆಗೆ ತನಗೇನು ಅಪಾಯವಿಲ್ಲೆಂದು ಮನವರಿಕೆಯಾದಾಗ ತೋಳವು ಬಕ್‌ನನ್ನು ಮೂಸಿನೋಡಿತು. ಗೆಳೆತನ ಬೆಳೆಸಿತು. ಅಡವಿಯಲ್ಲಿಯ ಕಾಡುಪ್ರಾಣಿಗಳ ಆಟದಂತೆ ಈರ್ವರ ಲೀಲೆ ಸಾಗಿತು. ಹೊಬಿಸಿಲಿ

ನಲ್ಲಿ, ಗಿಡದ ಹೊದರಿನಲ್ಲಿ, ಪರ್ವತಶ್ರೇಣಿಗಳ ಮೇಲೆ, ಚಳಿಯಲ್ಲಿ ಸಹ ಎರಡೂ ಪ್ರಾಣಿಗಳು ಸರಿಕರಂತೆ ತಿರುಗಾಡಿದವು.

ಸೂರ್ಯನು ಆಗಸದಲ್ಲಿ ಮೇಲೆ ಮೇಲೆ ಏರುತ್ತಿರುವಾಗ, ದಿವಸ ಹೆಚ್ಚು ಹೆಚ್ಚು ಬೆಚ್ಚಗಾಗುತ್ತಿರುವಾಗ ತಾಸುಗಟ್ಲೆ ಅವೆರಡೂ ಪ್ರಾಣಿಗಳು ವಿಶಾಲ ಕಾನನದಲ್ಲಿ, ಜುಳುಜುಳು ಹರಿಯುವ ಪ್ರವಾಹದಗುಂಟ ಅಲೆದಾಡುತ್ತಿದ್ದವು. ಬಕ್‌ನ ಆನಂದ ಅಪಾರವಾಗಿತ್ತು. ಕಾಡಿನ ಕರೆಗೆ ತಾನು ಓ ಕೊಡಬಲ್ಲೆನೆಂದು ಅದಕ್ಕೆನಿಸಿತು. ಹಿಂದಿನ ನೆನಪುಗಳು ಅದಕ್ಕೆ ಮರುಕಳಿಸಿದವು. ಸ್ವಚ್ಛಂದವಾಗಿ ವಿಹರಿಸತೊಡಗಿತು. ಮೇಲೆ ನೀಲ ನಭ. ಕೆಳಗೆ ನಿಃಸೀಮ ನೆಲ !

ಅವೆರಡೂ ನೀರು ಕುಡಿಯಲು ಝರಿಗೆ ಹೋದವು. ಕುಡಿಯುವಾಗ ಫಕ್ಕನೆ ಬಕ್‌ನಿಗೆ ಜಾನ್ ಥಾರ್ಟನ್ನನ ನೆನಪು ಮಿಂಚಿತು. ಕೆಳಗೆ ಕುಳಿತಿತು. ಕಾಡಿನ ಕರೆಯೆಡೆಗೆ ತೋಳ ಓಡಿತು. ನಾಯಿಗೆ ಪ್ರೋತ್ಸಾಹಿಸಲು ವಾಸನೆ ಹಿಡಿಯುತ್ತ ಮತ್ತೆ ಬಂದಿತು. ಆದರೆ ಬಕ್ ಹಿಂತಿರುಗಿ ಬಂದ ದಾರಿ ಹಿಡಿಯಿತು. ಸುಮಾರು ಅರ್ಧ ತಾಸು ಅದರ ಕಾಡಿನ ಗೆಳೆಯ ಹಿಂಬಾಲಿಸಿತು. ಆ ಮೇಲೆ ಕೆಳಗೆ ಕುಳಿತು ದೀರ್ಘವಾಗಿ ಒದರಿತು. ಅದು ಆರ್ತನಿನಾದ. ಆ ಧ್ವನಿ ಅಡಗುವವರೆಗೆ ಬಕ್ ಕೇಳಿತು.

ಬಕ್ ಬಂದಾಗ ಜಾನ್ ಥಾರ್ಟನ್ನನ ಊಟ ನಡೆದಿತ್ತು. ಬಂದದ್ದೇ ತಡ, ವಾತ್ಸಲ್ಯದಿಂದ ಟಣ್ಣನೆ ಅವನೆಡೆಗೆ ಜಿಗಿದು ಊಟದ ಸಾಮುಗ್ರಿಗಳನ್ನು ಅಸ್ತವ್ಯಸ್ತವಾಗಿಸಿತು. ಥಾರ್ಟನ್ ಅದನ್ನು ಮೈದಡವಿದ.

ಮುಂದಿನ ಎರಡು ದಿನ ಬಕ್ ಶಿಬಿರದಿಂದ ಹೆಜ್ಜೆ ಕೀಳಲಿಲ್ಲ. ಥಾರ್ಟನ್ನನ್ನೂ ಕಣ್ಮರೆಯಾಗಗೊಡಲಿಲ್ಲ ! ಯಾವ ಕೆಲಸದಲ್ಲಿ ಅವನಿದ್ದರೂ ಅಲ್ಲಿಯೇ ಹೋಗಿ ಕೂಡುತ್ತಿತ್ತು. ಮಲಗುವಾಗ ನೋಡುತ್ತಿತ್ತು. ಎದ್ದಾಗ ನೋಡುತ್ತಿತ್ತು. ಮತ್ತೆ ಎರಡು ದಿನದ ನಂತರ ಕಾಡಿನ ಕರೆ ಪ್ರಬಲವಾಯಿತು. ಮೊದಲಿನಂತೆ ಬಕ್‌ನಿಗೆ ಅಶಾಂತತೆ ತಲೆದೋರಿತು. ತನ್ನ ಕಾಡಿನ ಹೊಸ ಗೆಳೆಯನ ನೆನಪಾಯಿತು. ಕುಲುಕುಲು ನಗುವ ಕಾಡಿನ ವೈಶಾಲ್ಯ ಕೈ ಮಾಡಿ ಕರೆಯಿತು. ಮತ್ತೆ ಅಲೆದಾಡಲು ನಿರ್ಧರಿಸಿತು. ಆದರೆ ಕಾಡಿನ ಗೆಳೆಯ ಮರಳಲಿಲ್ಲ. ಹೃದಯವಿದಾರಕವಾದ ಅದರ ಧ್ವನಿಯೂ ಕೇಳಿಸಲಿಲ್ಲ !

ಅದು ಇರುಳು ಹೊರಗೆ ಮಲಗಹತ್ತಿತು. ಬಿದಿರು ಮತ್ತು ಕಾಲುವೆ ಪ್ರದೇಶದೆಡೆಗೆ ಒಮ್ಮೆ ಹೋಯಿತು. ಒಂದು ವಾರ ತಿರುಗಿತು. ಆದರೆ ಹೊಸ ಗೆಳೆಯನ ಗುರುತು ಸಿಗಲಿಲ್ಲ. ದಾರಿಯಲ್ಲಿ ಮಾಂಸಾರ್ಥಿಯಾಗಿ, ಸಿಕ್ಕ ಪ್ರಾಣಿ ಗಳನ್ನು ಕೊಲ್ಲುತ್ತ ಸಾಗಿತು. ನದಿಯಲ್ಲಿ ಮೀನು ಹಿಡಿಯಿತು. ಪ್ರವಾಹದ ದಂಡೆಗಿದ್ದ ಒಂದು ಕಪ್ಪು ಕರಡಿಯನ್ನು ಕೂಡ ಕೊಂದಿತು. ಬಕ್‌ನ ಹಿಂದಿನ ಸಾಹಸ ಆಗ ವ್ಯಕ್ತವಾಯಿತು. ಎರಡು ದಿನಗಳ ನಂತರ ಪುನಃ ಅಲ್ಲಿಗೆ ಬಂದಾಗ ಹದಿನೈದು ಇಪ್ಪತ್ತು ತೋಳಗಳು ಆ ಸತ್ತ ಪ್ರಾಣಿಯನ್ನು ತಿನ್ನುವ ವರಲ್ಲಿ ಉದ್ಯುಕ್ತವಾಗಿದ್ದವು. ಅವನ್ನೆಲ್ಲ ಕ್ಷಣಾರ್ಧದಲ್ಲಿ ಬಕ್ ಓಡಿಸಿಬಿಟ್ಟಿತು.

ರಕ್ತದಾಹ ಬಕ್‌ನಲ್ಲಿ ಉಜ್ವಲವಾಯಿತು. ಕೇವಲ ಶಕ್ತಿಯನ್ನೇ ಅವಲಂಬಿಸಿ ಬಕ್ ಜೀವಂತ ಪ್ರಾಣಿಗಳನ್ನಷ್ಟೆ ಕೊಂದು ತಿನ್ನುವ ವ್ಯವಸ್ಥಿತ ಪರಿಪಾಠವನ್ನಿಟ್ಟುಕೊಂಡಿತು. ಈ ಪರಾಕ್ರಮದಿಂದ ಅದಕ್ಕೆ ಬಿಂಕವೂ ಬಂದಿತು. ಸಹಜವಾಗಿ ನೋಡಿದಾಗ ಅದು ತೋಳವನ್ನೇ ಹೋಲುತ್ತಿತ್ತು. ಸೆಂಟ್ ಬರ್ನಾರ್ಡ ತಂದೆಯಿಂದ ಅದಕ್ಕೆ ತೂಕ, ಆಕಾರಗಳ ಸೌಲಭ್ಯ ಸಿಕ್ಕಿತ್ತು. ತಾಯಿ ಅದಕ್ಕೆ ಸುಸ್ವರೂಪ ಕೊಟ್ಟಿತ್ತು. ಅದರ ಮೂಗಿನ ತುದಿ ತೋಳನ ಮೂಗಿನ ತುದಿಯನ್ನೇ ಹೋಲುತ್ತಿತ್ತು. ತಲೆ ಅಗಲ. ಠಕ್ಕುತನ ತೋಳದ್ದೇ. ಜಾಣತನ ಸೆಂಟ್ ಬರ್ನಾರ್ಡ ಜಾತಿಯದು. ಇವುಗಳ ಜೊತೆಗೆ ಕಾಡಿನ ಅನುಭವ —ಎಲ್ಲ ಒಟ್ಟೊಳಗೂಡಿ ಭಯಾನಕತೆಯ ಮೂರ್ತಿಮಂತ ಸ್ವರೂಪ ವಾಗಿತ್ತದು. ಮಾಂಸ ತಿನ್ನುತ್ತಿದ್ದುದರಿಂದ ಬಕ್‌ನಲ್ಲಿ ಸತ್ವ ಹೆಚ್ಚಿತು. ಥಾರ್ಟನ್ ಅದರ ಮೇಲೆ ಕೈಯಿಟ್ಟಾಗ ಲೋಹಚುಂಬಕದಂತೆ ಅದೆನಿಸಿತ್ತು ! ದೇಹದ ಯಾವ ಭಾಗವೇ ಆಗಲಿ ಪರಿಪಕ್ವದಿಸೆಗೆ ಮುಟ್ಟಿತ್ತು. ಕಣ್ಣು ಕಿವಿ ಗಳೊ—ಬಲು ಸೂಕ್ಷ್ಮ. ವಿದ್ಯುಚ್ಛಕ್ತಿಯೇ ಸೈ ! ಹಸ್ಕಿ ನಾಯಿಗಳನ್ನು ಚಪಲತೆಯಲ್ಲಿ ನಾಚಿಸುತ್ತಿತ್ತು ಬಕ್. ಉಕ್ಕಿನ ಪಂಜರ ಅದರ ಮೈ. ಆನಂದೋ ನ್ಮಾದವೇ ಉಕ್ಕಿದಂತೆ ಅದರ ಠೀವಿ.

ಅದರ ಠಕ್ಕುತನ ತೋಳದ ಧರ್ತಿಯದು. ಬುದ್ಧಿ ಮತ್ತೆ ದಕ್ಷ ಕುರುಬನದು; ಸೇಂಟ ಬರ್ನಾರ್ಡದ್ದೂ ಅಹುದು. ಅತಿ ಭಯಾನಕ ಪ್ರಾಣಿಗಳೊಡನೆ ಅಖಂಡವಾಗಿ ಹೋರಾಡಿ ವ್ಯವಹರಿಸಿದ ಮೂಲಕ ಜೀವನದಲ್ಲಿ ವಿಲಕ್ಷಣ ಅನುಭವ ಉಂಟಾಗಿತ್ತು. ಕಾಡಿನಲ್ಲಿ ಅಲೆದಾಡುವ ಪ್ರಾಣಿಗಳೆಲ್ಲ ಇದಕ್ಕೆ

ಹೆದರಿದಷ್ಟು ಬೇರಾವ ಪ್ರಾಣಿಗಳಿಗೂ ಹೆದರುವಂತಿದ್ದಿಲ್ಲ. ಸಂಪೂರ್ಣ ಮಾಂಸಾಹಾರಿಯಾದ ಆ ಪ್ರಾಣಿ ಈಗ ಪೂರ್ಣ ಪರಿಪಕ್ವಾವಸ್ಥೆ ಮುಟ್ಟಿತ್ತು—ತನ್ನ ದಿಸೆಯಲ್ಲಿಯೆ ! ಸತ್ವ, ಶಕ್ತಿ, ಉತ್ಸಾಹ ಅವರಲ್ಲಿ ತುಂಬಿ ಹೊರಸೂಸುತ್ತಿದ್ದವು. ಥಾರ್ಟನ್ ಅದಕ್ಕೆ ಮಮತೆಯಿಂದ ಮೈದಡವಿದರೆ ಸಾಕು, ಕೈಗುಂಟೆ ಏರಿ ಬರುತ್ತಿತ್ತು. ಕಬ್ಬಿಣದ ಕಣಗಳನ್ನು ಲೋಹಚುಂಬಕ ಎಳೆದುಕೊಂಡಂತೆ ಅದರ ಮೈಗೂದಲುಗಳಲ್ಲಿ ವಿದ್ಯುಚ್ಛಕ್ತಿ ನಿರಂತರ ಪ್ರವಹಿಸಿದಂತಾಗಿ, ಹಠಾತ್ತಾಗಿ ಕೂದಲು ನಿಮಿರಿ ನಿಲ್ಲುತ್ತಿದ್ದವು. ಬರಿ ಕೂದಲಷ್ಟೇ ಏಕೆ ? ದೇಹದ ಪ್ರತಿ ಅವಯವ—ಮಿದುಳು, ಶರೀರ, ಸ್ನಾಯುಮಂಡಲ, ಸಾಮಾನ್ಯ ನರ ಕೂಡ ಇದೇ ಚೈತನ್ಯಾವಸ್ಥೆ ತಾಳುತ್ತಿದ್ದವು. ಈ ವಿಭಾಗಗಳಲ್ಲೆಲ್ಲ ಪರಿಪೂರ್ಣ ಸಮನ್ವಯ ಸ್ಫುಟವಾಗಿ ತೋರುತ್ತಿತ್ತು. ಯಾವದಾದರೊಂದು ಧ್ವನಿ ಕೇಳಿದರೆ, ದೃಶ್ಯದೆಡೆಗೆ ಲಕ್ಷ್ಯ ಹೋದರೆ, ಪ್ರತಿಕ್ರಿಯೆ ತೋರಿಸಬೇಕೆನಿಸಿದಾಗ ವಿದ್ಯುತ್ತಿನ ರಭಸ ಅದರಲ್ಲುಂಟಾಗುತ್ತಿತ್ತು. ಹಸ್ಕಿ ನಾಯಿಯಂತೆ ಪ್ರಸಂಗ ಬಿದ್ದಾಗ ಅದು ಎದುರಾಳಿಯಿಂದ ಸಮರ್ಪಕವಾಗಿ ರಕ್ಷಿಸಿಕೊಳ್ಳುತ್ತಿತ್ತು. ಏರಿ ಹೋಗುವ ಸನ್ನಿವೇಶದಲ್ಲಿ ಎಂದೂ ಹಿಂಜರಿಯುತ್ತಿದ್ದಿಲ್ಲ. ಮಿಂಚಿನ ವೇಗದಲ್ಲಿ ನೆಗೆಯುತ್ತಿತ್ತು. ಎಂತಹ ಚಲನವಲನ ಕಂಡಾಗಲೂ, ಧ್ವನಿ ಕೇಳಿದಾಗಲೂ, ಅದು ಸಾಮಾನ್ಯ ನಾಯಿಗಿಂತಲೂ ಅತಿ ತ್ವರಿತ ಗತಿಯಿಂದ, ಅವು ಇನ್ನೂ ಪೂರ್ವಸಿದ್ಧತೆಯಲ್ಲಿ ತೊಡಗಿರುವಾಗಲೆ ತಾನು ಪ್ರತಿಕ್ರಿಯೆ ತೋರಿಸಿಯೇ ಬಿಟ್ಟಿರುತ್ತಿತ್ತು. ಅರಿವು ಉಂಟಾಗುವದಾಗಲಿ, ನಿರ್ಣಯಕ್ಕೆ ಬರುವದಾಗಲಿ, ಕ್ರಿಯಾಪ್ರವೃತ್ತವಾಗುವದಾಗಲಿ—ಎಲ್ಲವೂ ತತ್‌ಕ್ಷಣದಲ್ಲಿಯೆ ! ಯಾವದು ಇದರಲ್ಲಿ ಮೊದಲು ಎಂದು ಕಂಡುಹಿಡಿಯುವದು ಎಂತಹರಿಗೂ ಕಠಿಣವೆಂದೇ ಹೇಳಬೇಕು. ಹೀಗೆ ಅವರ ತ್ರಿವಿಧ ಕರ್ಮಕಾಂಡ ಏಕಕಾಲಕ್ಕೆ ಮಿಂಚಿನವೇಗದಿಂದ ಪೂರೈಸಿಬಿಡುತ್ತಿತ್ತು. ಸ್ನಾಯುಗಳು ಸತ್ವದಾಗರವಾಗಿದ್ದವು. ತೀಕ್ಷ್ಣತೆಯಿಂದ ಕಾರ್ಯತತ್ಪರವಾಗುತ್ತಿದ್ದವು—ಉಕ್ಕಿನ ಹುಕ್ಕುಗಳಂತೆ ! ಅದ್ಭುತ ಮಹಾಪೂರದಂತೆ ಅವರಲ್ಲಿ ಜೀವ ದುಮುದುಮಿಸುತ್ತಿತ್ತು. ಅಂತಹ ಅಪರಿತ ಉನ್ಮಾದಾವಸ್ಥೆ ! ಯಾವಾಗ ತನ್ಮೂಲಕ ಶರೀರ ಸೀಳಿ ಅದು ಉಕ್ಕಿ ಹೊರಸೂಸುತ್ತಿತ್ತೊ ಹೇಳಲಿಕ್ಕೆ ಬರುವಂತಿರಲಿಲ್ಲ. ಜಗತ್ತನ್ನೇ ಅದೆಲ್ಲಿ ವ್ಯಾಪಿಸಿಬಿಡುತ್ತದೊ ಎಂದು ಭ್ರಮೆಯುಂಟಾಗುತ್ತಿತ್ತು !

ಇನ್ನುಳಿದ ನಾಯಿಗಳು ಶಿಬಿರದಿಂದ ಹೊರಹೊರಟಾಗ ಬಕ್‌ನನ್ನು ನೋಡಿ ಥಾರ್ಟನ್ ಒಂದು ದಿನ ಉದ್ಗಾರ ತೆಗೆದ —" ಇಂತಹ ನಾಯಿಯು ಎಲ್ಲಿಯೂ ಸಿಗಲಿಕ್ಕಿಲ್ಲ!"

" ಇದರ ನಿರ್ಮಿತಿ ನಡೆದಾಗ ಬಹುಶಃ ಪಡಿಯಚ್ಚೇ ಮುರಿದಿರ ಬೇಕಷ್ಟೆ ! " ಎಂದು ಪೇಟ ನುಡಿದ.

" ಹಾಂ ! ನನಗೆ ಹಾಗೇ ಸಂಶಯ ಬರುತ್ತಿರುತ್ತದೆ " ಎಂದು ಹ್ಯಾನ್ಸ ಅವರ ಮಾತನ್ನೆ ಪುರಸ್ಕರಿಸಿದ.

ಶಿಬಿರದಿಂದ ಅದು ಹೊರಗೆ ಗಾಂಭೀರ್ಯದಿಂದ ಹೊರಟದ್ದನ್ನು ಅವರು ನೋಡಿದರು. ಆದರೆ ಕಾಡಿನ ಅಂತರಾಳದಲ್ಲಿ ಅದು ಅಡಿ ಇಟ್ಟೊಡನೆ ಎಂತಹ ಅದ್ವಿತೀಯ ಮಾನಸಿಕ ಪರಿವರ್ತನೆ ಅದರಲ್ಲಾಯಿತೆಂಬದು ಅವರಿಗೆ ಪಾಪ ಹೊಳೆಯುವದೆಂತು ? ಕೂಚು ಮಾಡುವದನ್ನು ಬಿಟ್ಟು ಬಿಟ್ಟಿತು. ಮರುಕ್ಷಣ ಅದು ಕಾಡಿನ ಅಂಗವಾಯಿತು. ಕಳ್ಳಹೆಜ್ಜೆಯಿಂದ ಕ್ರಮಿಸಹತ್ತಿತು. ಮೃದುವಾಗಿ ಹೆಜ್ಜೆ ಹಾಕಿತು. ಬೆಕ್ಕಿನ ನಡಿಗೆಯೆ ಸೈ ! ನೆರಳಿನಂತೆ ಅದೊಮ್ಮೆ ಕಾಣುವದು; ಆಗೀಗ ಮಾಯವಾಗುವದು. ರಕ್ಷಣೆಯ ಲಾಭ ಪಡೆಯುವ ಕಲೆ ಅವಕ್ಕೆ ಸಾಧಿಸಿತ್ತು. ಒಮ್ಮೊಮ್ಮೆ ಹಾವಿನಂತೆ ಹೊಟ್ಟೆ ಹೊಸೆಯುತ್ತಿತ್ತು. ಅದೆ ಹಾವಿನಂತೆ, ಪ್ರಸಂಗ ಬಂದಾಗ ಅಲಕ್ಕನೆ ಜಿಗಿದು ಗಾಯಗೊಳಿಸಲೂ ಹಿಂದು ಮುಂದು ನೋಡುತ್ತಿದ್ದಿಲ್ಲ. ಪಕ್ಷಿಗಳ ಗೂಡಿನೊಳಗೆ ಕೈ ಹಾಕಿ ಅದು ತತ್ತಿಗಳನ್ನು ಹೊರಗೆಳೆದು ಚೆಲ್ಲುತ್ತಿತ್ತು. ಮೊಲವು ಮಲಗಿರುವಾಗಲೇ ಕೊಂದು ಬಿಡುತ್ತಿತ್ತು. ಗಿಡಗಳ ಟೊಂಗೆಗಳಲ್ಲಿ ಹಾರಾಡುವ ಮಂಗಗಳನ್ನು ಹಿಡಿ ಯಲು ಹಾರೈಸಿ ಒಮ್ಮೊಮ್ಮೆ ಚಂಗನೆ ಗಾಳಿಯಲ್ಲಿ ನೆಗೆಯುತ್ತಿತ್ತು. ಬಯಲು ಮಡುವಿನಲ್ಲಿ ಈಜಾಡುವ ಮೀನಗಳ ಚಪಲತೆ ಇದರ ಮುಂದೆ ಏನೂ ಅಲ್ಲ. ತಿನ್ನುವ ಮನಸ್ಸಿನಿಂದಲೆ ಪ್ರಾಣಿಗಳನ್ನು ಅದು ಹಿಂಸಿಸುತ್ತಿದ್ದಿತೇ ವಿನಹಾ ಕ್ರೂರತನದಿಂದಲ್ಲ. ಆದರೆ ತಾನೇ ಗಾಯಗೊಳಿಸಿ ಕೊಂದದ್ದನ್ನು ತಿನ್ನುವದು ಅದಕ್ಕೆ ಸರಿ ಎನಿಸುತ್ತಿತ್ತು. ಅದರ ವಿಸ್ತ್ರುತ ಕಾರ್ಯರಂಗದಲ್ಲಿ ವಿನೋದಕ್ಕೆ ವಿಶೇಷ ಎಡೆ ಇದ್ದಿತು. ಇಣಚಿಗಳ ಬಳಿ ಕಳ್ಳಗತಿಯಿಂದ ಸಾಗಿ ಅವನ್ನು ಹಿಡಿಯುವದೆಂದರೆ ಅತಿ ಮೆಚ್ಚು ಅದಕ್ಕೆ. ಅಕಸ್ಮಾತ್ತಾಗಿ ಅವು ಅಳವು

ಮೀರಿ ತಪ್ಪಿಸಿಕೊಂಡುಹೋದದ್ದಾದರೆ ಅವುಗಳ ಹೆದರಿಕೆ ಹೇಳಲಾಸಲ್ಲ. ನೋಡನೋಡುವಷ್ಟರಲ್ಲಿಯೇ ಗಿಡದ ತುದಿ ಏರಿರುತ್ತಿದ್ದವು.

ವರುಷ ಮುಗಿಯುತ್ತ ಬಂದು, ಚಳಿಗಾಲದ ಕೊರೆತವೂ ಕ್ರಮೇಣ ಹೆಚ್ಚುತ್ತ ನಡೆದಂತೆ ಕೊಳ್ಳದಲ್ಲೆಲ್ಲ ಬಕ್‌ನ ಹಾವಳಿ ವಿಪರೀತ ಬೆಳೆಯಿತು. ಈಗಾಗಲೆ ಅದೊಂದು ಕರುವಿನ ಬಲಿ ತೆಗೆದುಕೊಳ್ಳುವವರಲ್ಲಿತ್ತು. ಆದರೂ ಇನ್ನೂ ಹೆಚ್ಚಿನ ಬೇಟೆ ಸಿಗಲಿ ಎಂದೆ ಅದರ ಆಕಾಂಕ್ಷೆ. ಹೀಗೆ ಒಂದು ದಿನ ಗುಡ್ಡದ ಕೊರಕಲದ ತುದಿಗೆ ಬಂದಿತು. ಸುಮಾರು ಇಪ್ಪತ್ತು ವನಕರುಗಳು ಬಿದಿರು ಮೆಳೆಗಳ ಪ್ರದೇಶದ, ಜವುಳು ಭೂಮಿಯ ಬಳಿಗೆ ಗುಂಪು ಗುಂಪಾಗಿ ಬಂದಿದ್ದವು. ಅವುಗಳಲ್ಲಿ ದೆವ್ವನಂತಹ ಹೋರಿಯೂ ಒಂದಿತ್ತು. ಅದಕ್ಕೆ ಮದ ಮಸ್ತಕಕ್ಕೇರಿತ್ತು. ನೆಲದಿಂದ ಆರು ಅಡಿ ಎತ್ತರ ಆದೀತಷ್ಟೆ. ಬಕ್‌ನಿಗೆ ಎಂದರೆ ಅದು ಯೋಗ್ಯ ಎದುರಾಳಿ ಎಂದು ಎದೆ ತಟ್ಟಿ ಹೇಳಬಹುದಿತ್ತು. ಇಂತಹದೆ ಅದಕ್ಕೆ ಬೇಕಾಗಿದ್ದುದೂ ನಿಜ. ಹೋರಾಟವೆಂದರೆ ಅದರ ಜೀವಾಳವಲ್ಲವೆ ? ಪೂರ್ಣ ವೈಚಾಚಿ ನಿಂತರೆ ಅದು ಏಳು ಅಡಿ ಎಂದರೂ ಚಿಂತೆ ಇಲ್ಲ ! ಅಂತಹ ವೈತುಂಬಿದ ಬೆಳವಣಿಗೆ. ಅದರ ಚಿಕ್ಕ ಕಣ್ಣುಗಳು ಥಳಥಳಿಸುತ್ತಿದ್ದವು. ಬಕ್‌ನನ್ನು ಕಂಡೊಡನೆ ಅದರ ರೊಚ್ಚು ಎಲ್ಲಿತ್ತೊ—ಡುರುಕೆ ಹಾಕಿತು.

ಹೋರಿ ಬರುವ ದಿಕ್ಕಿನಲ್ಲಿ ಒಂದು ಗಿಡದ ಟೊಂಗೆಗಳು ತೀರ ಮುಂದೆ ಬಂದಿದ್ದವು. ಇವನ್ನೆಲ್ಲ ಸರಿಸಿ ದಾರಿ ಸರಿ ಮಾಡಿಕೊಂಡು ಬರುವಾಗ ಅದು ಇನ್ನೂ ರಾವುಹೊಡೆಯುತ್ತಿತ್ತು. ತನ್ನ ಬೇಟೆಯ ಹಿಂದಿನ ರೋಮಾಂಚಕಾರಿ ದಿನಗಳ ನೆನಪು ಮಿಂಚಿ, ಮೊದಲಿನ ಕಾಡುತನ ಮತ್ತೆ ಅಂಗಾಂಗಳಲ್ಲಿ ಸಂಚರಿಸಿತು. ಆ ಹಿಂಡಿನಿಂದಲೇ ಹೋರಿಯನ್ನು ಬೇರ್ಪಡಿಸಿ ಹೋರಾಟ ಹೂಡಬೇಕೆಂದು ಸಂಕಲ್ಪಿಸಿತ್ತು. ಅದೇನು ಎಣಿಸಿದಷ್ಟು ಸಣ್ಣ ಸಂಗತಿಯಾಗಿರಲಿಲ್ಲ. ಆ ಹೋರಿಯ ಎದುರಿಗೆ ಹೋಗಿ ಹಾರಾಡಿತು, ಕುಣಿದಾಡಿತು, ವಿವಿಧ ಬಗೆಯಾಗಿ ಬೊಗಳಿತು. ಹೀಗೆ ಮಾಡಿದಾಗ ಸಿಟ್ಟಿಗೆದ್ದು ತನ್ನನ್ನು ಕೋಡಿನಿಂದ ತಿವಿಯಲು ಮುಂದೆ ಬರಲಿ—ಎಂದು ಲೆಕ್ಕ ಹಾಕಿತ್ತು. ಒಮ್ಮೊಮ್ಮೆ ಅದರ ಲೆಕ್ಕ ಸರಿ ಹೋಗಿ ರೌಸಿಗೆದ್ದಾಗ ಮಾತ್ರ ಏರಿ ಬರಲು ಹವಣಿಸುತ್ತಿತ್ತು. ಹೀಗೆ ಆದಾಗ ಬಕ್ ಠಕ್ಕುತನ ಮುಂದು ಮಾಡಿ ಹಿಂದೆ ಸರಿಯುತ್ತಿತ್ತು.

ತಪ್ಪಿಸಿಕೊಳ್ಳಲು ಹವಣಿಸುವ ಸೋಗು ಹಾಕುತ್ತಿತ್ತು. ಇಂತು ಹೋರಿಯೊಮ್ಮೆ ಹಿಂಡಿನಿಂದ ಮುಂದುವರಿದು ಬಂದಾಗ ಅದರ ಸಂಗಡಲೆ ಎರಡು ಮೂರು ಹೋರಿ ಇದ್ದವು. ಹೋರಿ ಗಾಯಗೊಂಡಾಗ ತಿರುಗಿ ಹಿಂಡಿಗೆ ಕೂಡಲು ಅವು ಸಹಾಯ ಮಾಡುತ್ತಿದ್ದವು.

ಕಾಡಿನಲ್ಲಿಯ ಪ್ರಾಣಿಗಳಲ್ಲಿ ಒಂದು ಬಗೆಯ ತಾಳ್ಮೆ ಇರುವವಂತೆ. ಅಲ್ಲಿಯ ಜೀವಗಳಿಗೆ ಬೇಜಾರವೆಂಬುದಿಲ್ಲ. ಹಟ, ಅತಿ ಹಟ. ಬಲು ಜಿಗುಟುತನ. ಬಲಿಯೊಳಗಿನ ಜೇಡ, ಮುಮುಡಿಕೊಂಡು ಕುಳಿತ ಹಾವು, ಜಪ್ಪಿಸಿಕೊಂಡು ಕಾಯುವ ಚಿರ್ಚ—ಇವೆಲ್ಲ ಒಳ್ಳೇ ನಿದರ್ಶನ. ಆಹಾರಾರ್ಥಿಯಾದ ಬೇಟೆಯ ಪ್ರಾಣಿಗೆ ಇಂತಹ ಗುಣವಿರುವದುಂಟು. ಹಿಂಡಿನಲ್ಲಿಯ ಹೋರಿಯ ಮೇಲೆ ಕಣ್ಣಿಟ್ಟ ಬಕ್‌ನ ಹಾಡೂ ಇವೇ. ಅದರ ಲೀಲೆ ಭಯಾನಕವಾಗಿದ್ದವು; ಅಸಂಖ್ಯಾತವೂ ಎನಿಸಿದ್ದವು. ಚಿಕ್ಕ ಹೋರಿಗಳನ್ನು ಕಾಡುವದೆ ? ಆಕಳುಗಳಿಗೆ ಉಪದ್ರವವೆ ? ಕರುಗಳಿಗೆ ತೊಂದರೆಯೆ ? ಉನ್ಮತ್ತ ಹೋರಿಗೆ ಹೌಹಾರುವಂತೆ ಮಾಡುವದೆ ?—ಅದರ ಉಪಟಳಕ್ಕೆ ಇತಿಮಿತಿಯೇ ಇರಲಿಲ್ಲ. ಇಡೀ ಅರ್ಧ ದಿನ ಇದೇ ವಿಧವಾಗಿ ಗದ್ದಲ ನಡೆಯಿತು. ದಿಕ್ಕು ದಿಕ್ಕಿನಿಂದ ಬಕ್ ಹೋರಿಯನ್ನೆದುರಿಸುತ್ತಿತ್ತು. ಸುಂಟರಗಾಳಿಯಂತೆ ಹಿಂಡಿನ ಸುತ್ತಲೂ ತಿರುಗುತ್ತಿತ್ತು. ತನ್ನ ಬೇಟೆಗೆ ಸಾಧ್ಯವಾದಷ್ಟು ಗಾಯಗೊಳಿಸುವದೇ ಅದರ ಗುರಿಯಾಗಿತ್ತು. ಆದಾದರೊ ಹೇಗೂ ಹಿಂಡಿಗೆ ಹೋಗಿ ಬೀಳುತ್ತಿತ್ತು. ಏನೇ ಆಗಲಿ—ತಾಳ್ಮೆಗೆಟ್ಟು ಎರಿಬಂದು ಬಲಿಗೆ ಬಿದ್ದರೆ ಸಾಕೆಂಬಂತೆ ಬಕ್‌ನ ಚಟುವಟಿಕೆ ನಡೆದಿದ್ದವು. ಬೇಟೆ ಹಿಡಿಯುವ ಪ್ರಾಣಿಗಳ ರೀತಿಯೇ ಇದು.

ದಿವಸ ಕಳೆಯುತ್ತ ನಡೆದು ಕ್ರಮೇಣ ಸೂರ್ಯನು ತಾಯಿಯ ಮಡಲಲ್ಲಿ ಹೋಗಲನುವಾದಾಗ (ಅರೆ ಕತ್ತಲೆ ವ್ಯಾಪಿಸಲುದ್ಯುಕ್ತವಾಗಲು) ಚಿಕ್ಕ ಹೋರಿಗಳು ಹೆಜ್ಜೆ ಹೆಜ್ಜೆ ಹಿಂದೆ ಸರಿದು, ತಮ್ಮ ಬಳಗದ ಹಿರಿಯನ ಸಹಾಯಕ್ಕಾಗಿ ಹಂಬಲಿಸತೊಡಗಿದವು. ಮಡುವುಗಟ್ಟಿ ಬರುವ ಚಳಿ ಸಹಿಸಲಾಗದೆ ಅವು ಇಳುಕಲು ಪ್ರದೇಶದೆಡೆಗೆ ಸಾಗಿದವು. ತಮ್ಮನ್ನು ಇಷ್ಟೊಂದು ರಭಸದಿಂದ ತಡೆಗಟ್ಟಿ ಜೀವ ಹಿಂಡುವ ಪ್ರಾಣಿಯಿಂದ ತಮಗೆ ಈ ದಿನ ಮುಕ್ತಿಯೇ ಇಲ್ಲವೆಂದು ವ್ಯಾಕುಲವಾದವು. ಇದೊಂದು ಬರಿ ಹಿಂಡಿಗೆ, ಚಿಕ್ಕ ಹೋರಿ

ಗಳಿಗೆ ಬಂದ ಒಂದು ಸಮಸ್ಯೆಯಲ್ಲ; ಉಂಟಾವ ಸಂಕಟವಲ್ಲ. ಆದರೆ ಒಂದೇ ಒಂದು ಪ್ರಾಣಿ—ದೊಡ್ಡ ಹೋರಿ—ಅದರ ಕಟಾಕ್ಷದಲ್ಲಿತ್ತು. ಅವನ್ನುಳಿಸಿ ಕೊಳ್ಳಲು ತಾವು ತಮ್ಮೆಲ್ಲ ಜೀವ ತೆತ್ತಿದರೂ ಹೆಚ್ಚಲ್ಲ ಎಂಬ ಸಿದ್ಧಾಂತಕ್ಕೆ ಬಂದವವು.

ಹೂಬಿಸಿಲು ಹರಡುತ್ತಿರುವಾಗ ಹಿರಿ ಹೋರಿ ತಲೆ ತಗ್ಗಿಸಿತು. ತನಗೆ ಪರಿಚಿತವಾದ ಆಕಳುಗಳನ್ನು, ತಾನು ಪೋಷಿಸಿದ ಕರುಗಳನ್ನು, ಶಕ್ತಿಯಿಂದ ವಶಪಡಿಸಿಕೊಂಡ ಇತರ ಹೋರಿಗಳನ್ನು ಹುಡುಕಲು ಅತ್ತಿತ್ತ ನೋಡಿತು. ಮಸುಕು ಮಸುಕು ಬೆಳಕಿನಲ್ಲಿ ಅವೆಲ್ಲ ಅದೇ ರಭಸದಿಂದ ಹೋಗುವದು ಕಾಣಿಸಿತು. ಅದಕ್ಕೂ ಹೋಗಬೇಕೆಂಬ, ಪರಿವಾರವನ್ನು ಹಿಂಬಾಲಿಸಬೇಕೆಂಬ ಆಸೆ ಉತ್ಕಟವಾಯಿತು. ಆದರೆ ಮಾಡುವದೇನು ? ಹಲ್ಲು ಕಚ್ಚಿ, ಸಿಂಹನಂತೆ ರೌದ್ರರೂಪ ತಾಳಿದ ನಾಯಿ ಬಂದು ಮತ್ತೆ ಅಡ್ಡಗಟ್ಟಿತು. ಹಿಂಡು ಕೂಡುವದು ಬಿಸಿಲುಗುದುರೆಯಾಯಿತು. ಅದರ ತೂಕವೇನೂ ತಪ್ಪಿಸಲ್ಲಿಲ್ಲ. ಒಂದು ಟನ್ನಿಗೆ ಸ್ವಲ್ಪೇನೊ ಕಡಿಮೆಯಾದೀತು. ಹೋರಿ ದೀರ್ಘಕಾಲ ಜೀವಿಸಿತ್ತು (ತನ್ನ ಜೀವಿತದ ಆಯುಃ ಪ್ರಮಾಣದಲ್ಲಿ !). ಕಠಿಣ ಜೀವನ ನಡೆಸಿತ್ತು. ಹೊರಾಟ, ಜಗಳಕ್ಕೇನು ಕೊರತೆಯುಂಟಾಗಿರಲಿಲ್ಲ. ಆದರೂ ಕೊನೆಗೆ ಮರಣೋನ್ಮುಖವಾಗುವ ದುರ್ಧರ ಪ್ರಸಂಗ ಅಡಿ ಇಟ್ಟಿತು. ಮಾಡುವದೇನು ? ವಿಧಿ ಸಂಕಲ್ಪ ! ಮೀರುವವರಾರು ?

ಆಗಿನಿಂದ ಹಗಲು ರಾತ್ರಿ ಎನ್ನದೆ, ಎಡೆಬಿಡದೆ ಬಕ್ ತನ್ನ ಬೇಟೆಯನ್ನು ಬಿಡಲಿಲ್ಲ. ಒಂದು ಕ್ಷಣ ವಿರಾಮ ಒದಗಿಸಲಿಲ್ಲ. ಗಿಡದ ಹಸುರೆಲೆ, ಮಲ ಮಲ ಎನ್ನುವ ಚಿಗುರು, ಬರ್ಚ ಸಸಿಗಳನ್ನು ತಿನ್ನಬೇಕೆಂದರೆ ಸಾಧಿಸಲಿಲ್ಲ. ತೃಷ್ಣೆವಿರುದ್ಧ ಗಾಯಗೊಂಡ ಹೋರಿಗೆ ನೀರಡಿಕೆ ಸಾವಾಗಿದ್ದರೂ ಗುಟುಕು ನೀರು ಕುಡಿಯಲು ಅನುವು ಕೊಡಲಿಲ್ಲ. ನೋಡಿದರೆ ಬಳಿಯಲ್ಲಿಯೇ ತಿಳಿಯಾದ ಸೀನೀರ ಝುರಿಗಳಲ್ಲಿದ್ದವು. ಅವನ್ನು ದಾಟುವ ಪ್ರಸಂಗಗಳೂ ಹಲವಾರು ಬಂದಿದ್ದವು—ಹೋರಾಟಕಾಲದಲ್ಲಿ. ಒಮ್ಮೊಮ್ಮೆಯಂತೂ ಜೀವದ ಹಂಗು ದೊರೆದು ಮನಬಂದಂತೆ ಅದು ಹಾರಿಗ್ಹಾಲು ಹಾಕುತ್ತಿತ್ತು; ಹುಲಿಯಂತೆ ಹಾರುತ್ತಿತ್ತು. ಇಂತಹ ಪ್ರಸಂಗಗಳಲ್ಲಿ ಬಕ್ ಅದನ್ನು ತಡೆಯಲಿಲ್ಲ. ಅದರ ಕಾಲು ಹಿಂದೇ ಇರುತ್ತಿತ್ತು. ಎಲ್ಲ ಆವೇಶ ನೋಡಿ ಒಳಗೊಳಗೆ ಕಳಕಳಿಸಿ ನಗುತ್ತಿತ್ತು.

ಮತ್ತೆ ಸ್ಥಿರತೆ ಬಂದಾಗ ಅದನ್ನು ಭಯಾನಕವಾದ ತನ್ನ ಕಳ್ಳರೀತಿಯಿಂದಲೇ ಎದುರಿಸುತ್ತಿತ್ತು.

ಹೋರಿಯ ದೊಡ್ಡ ತಲೆ ಈಗ ನಿಃಸತ್ವವಾಗತೊಡಗಿತು. ಕೊಂಬು ಗಳಿಗೆ ಶೋಭೆ ಉಳಿಯಲಿಲ್ಲ. ಇಳಿಮುಖವಾದಂತೆ ಕಂಡುಬಂದಿತು. ಉತ್ಸಾಹ ಕುಗ್ಗ ಹತ್ತಿತು. ಎಷ್ಟೋ ಕಾಲ ಹಾಗೇ ಸುಮ್ಮನೆ ನಿಲ್ಲುತ್ತಿತ್ತು. ಮೂಗು ನೆಲಕ್ಕೆ ಹಚ್ಚಿ, ಕಿವಿಗಳನ್ನು ಕೆಳಗೆ ಇಳಿಬಿಟ್ಟು ಹತಾಶವಾಗುತ್ತಿತ್ತು. ಅದೇ ವಿಶ್ರಾಂತಿಯ ಸಮಯ ಅದಕ್ಕೆ. ಆದರೆ ಬಕ್‌ನ ಯುಕ್ತಿ ಬೇರೆ. ಹೋರಿ ಹೌಹಾರಿಹೋದಾಗ, ತಾನು ನೀರು ಕುಡಿದು ವಿಶ್ರಮಿಸಿಕೊಳ್ಳುತ್ತಿತ್ತು. ಮತ್ತೆ ದ್ವಂದ್ವಯುದ್ಧಕ್ಕೆ ಹೊಸ ಚೈತನ್ಯ ತಂದುಕೊಳ್ಳುತ್ತಿತ್ತು ಆಗ ತನ್ನ ಕೆಂಡ ದಂತಹ ಕೆಂಪು ನಾಲಗೆ ಹೊರಗೆ ಚಾಚಿ, ಕಿಡಿಸೂಸುವಂತಹ ಕಣ್ಣುಗಳಿಂದ ಹೋರಿಯನ್ನು ಕೆಕ್ಕರಿಸಿ ನೋಡಿ, ಸೃಷ್ಟಿಯಲ್ಲಿಯ ಹೊಸ ಪರಿವರ್ತನೆಯ ಬಗೆಗೆ ಆಲೋಚಿಸುತ್ತಿತ್ತು. ನೆಲದಲ್ಲಿ ನವೀನ ಜೀವಕಳೆ ಸ್ಫುರಿಸಿದ ಅನು ಭವ ಅದಕ್ಕಾಯಿತು. ದನಗಳ ಹಿಂಡು ನೋಡಿದಾಗಿನ ಮನಃಸ್ಥಿತಿಯೇ ಬೇರೆ. ಕಾನನ, ಝರಿಗಳಲ್ಲಿಯ ವಾತಾವರಣದಲ್ಲಿ ಸಮ್ಮಿಶ್ರ ಜೀವನ ಎನಿಸಿತ್ತು. ಈ ಜೀವನಾನುಭವ ನೋಟ,—ಧ್ವನಿ, ವಾಸನೆಗಳಿಂದ ಲಭಿಸುತ್ತಿರಲಿಲ್ಲ ಬಕ್ ನಿಗೆ. ಅತೀಂದ್ರಿಯ ಕಲ್ಪನೆಯೋ ಅದು. ಏನೂ ಅದಕ್ಕೆ ಕೇಳಿಸುತ್ತಿರಲಿಲ್ಲ; ಕಣ್ಣಿಗೂ ಬೀಳುತ್ತಿರಲಿಲ್ಲ. ಆದರೂ ಹೊಸ ನೆಲ, ಹೊಸ ಜಲ ! ಏನೋ ವಿಶೇಷ ಪರಿವರ್ತನೆ ! ಈ ಅಪೂರ್ವ ಗಾಳಿಗುಂಟ ಅಪೂರ್ವ ಸಂಗತಿಗಳೇ ಸಂಭವಿಸುತ್ತಿದ್ದವು. ಈಗಿನ ಈ ಕೆಲಸವಾದೊಡನೆ ಈ ಜೀವನದ ರಹಸ್ಯ ವನ್ನು ವಿರಾಮಕಾಲದಲ್ಲಿ ಬೆದಕಿ ನೋಡುವಾ—ಎಂದು ಅದು ನಿರ್ಧರಿಸಿತು.

ಕೊನೆಗೆ ಹೀಗೆ ನಾಲ್ಕನೆಯ ದಿನ ಹೋರಿಯನ್ನು ಹಣ್ಣುಮಾಡಿತು. ಎಂತಹ ಭವ್ಯ ಪ್ರಾಣಿ ! ಈಡಾಗುವ ಲಕ್ಷಣ ಉಳಿಯಲಿಲ್ಲ. ಜೀವ ನೀಗಿತು. ಬಕ್‌ನ ಆಹಾರ ವಿಹಾರಕ್ಕೆ ಏನೂ ಕೊರತೆಯಾಗಿರಲಿಲ್ಲವಷ್ಟೆ. ಅಂತೇ ಶಕ್ತಿಯೂ ಹೆಚ್ಚುವದರಲ್ಲಿಯೇ ಇದ್ದಿತು. ಮತ್ತೆ ಅದರ ಮನಸ್ಸು ಥಾರ್ಟನ್ ನೆಡೆಗೆ ಹರಿಯಿತು. ಉದ್ದೋ ಉದ್ದ ಸೀಳುದಾರಿಗುಂಟ ಸರಸರನೆ ಸಾಗಿತು ಎಷ್ಟೋ ತಾಸು ! ಎಲ್ಲಿಯೂ ದಾರಿ ತಪ್ಪಿಸಿಕೊಳ್ಳಲಿಲ್ಲ. ನೇರವಾಗಿ

ಮನೆಯ ಹಾದಿ ಹಿಡಿಯಿತು. ಹೋಕಾಯಂತ್ರದ ಮುಳ್ಳು ಅದರ ಮುಂದೆ ನಾಚುವದೇ ಸರಿ !

ಭೂಮಿಯಲ್ಲಿ ವಿಶಿಷ್ಟವಾದದ್ದೊಂದು ಚೈತನ್ಯ ಉಂಟಾದುದು ಅದರ ಗಮನಕ್ಕೆ ಬಂದಿತು. ಬೇಸಿಗೆಯಲ್ಲಿಯ ಸೃಷ್ಟಿಯ ಸ್ವರೂಪವೇ ಬೇರೆ; ಈಗಿನದೂ ಬೇರೆ. ಸೂಕ್ಷ್ಮವಾಗಿ ಇಲ್ಲವೇ ರಹಸ್ಯಾತ್ಮಕವಾಗಿ ಈ ಸಂಗತಿಯ ಪರಿಣಾಮ ಅದರಮೇಲೆ ಆಗಿರಲಿಲ್ಲ. ಪಕ್ಷಿಸಂಕುಲವೇ ಅದಕ್ಕೆಲ್ಲ ನಿದರ್ಶನ. ಕಿಲಕಿಲ ನಿನಾದ ಅವುಗಳ ಉಸಿರು. ಇಣಚಿಗಳೂ ಋತುಮಾನದ ಪರಿಣಾಮ ಅನುಭವಿಸಿದಂತೆ ಧ್ವನಿಗೈಯ್ಯುತ್ತಿದ್ದವು. ಸಮ್ಮಿಶ್ರ ಧ್ವನಿಯದು ! ಪ್ರಾಣಿವರ್ಗವಷ್ಟೇ ಏಕೆ ? ತಂಗಾಳಿ ಕೂಡ ಆ ಸಂದೇಶವನ್ನೆ ಕಿವಿಯಲ್ಲುಸಿರುತ್ತಿದ್ದಂತೆ ಭಾಸವಾಗುತ್ತಿತ್ತು. ಅನೇಕ ಸಲ ಅದು ಥಟ್ಟನೆ ನಿಂತು ಮುಂಜಾವಿನ ಆಲ್ಹಾದಕರ ಹವೆಯನ್ನು ಮೂಸಿನೋಡುತ್ತಿತ್ತು. ಆ ಸಂದೇಶ ಅದಕ್ಕೆ ಅರ್ಥವಾಗಿ ಗಾಳಿತುಂಬಿದಂತಾಗಿ ಅನಿರೀಕ್ಷಿತ ವೇಗದಿಂದ ಮುನ್ನುಗ್ಗುತ್ತಿತ್ತು. ಮುಂದೇನಾದರೂ ಸಂಕಟದ ಪ್ರಸಂಗ ಬಂದಾವೆಂದು ಅದಕ್ಕೆ ಚಿಂತೆ. ಹಿಂದಂತೂ ಸಂಭವಿಸಿದುವು ಮರೆವಿನ ಸ್ವಪ್ನ ಸಾಮ್ರಾಜ್ಯಕ್ಕೆ ಧಾವಿಸಿದ್ದವಷ್ಟೆ. ಕೊನೆಯ ಸಲಿಲ ಪ್ರವಾಹ ದಾಟಿ, ಕೊಳ್ಳದಲ್ಲಿ ಹಾಯ್ದು ಶಿಬಿರದೆಡೆ ಬಂದಿತು– ಅತಿ ಜಾಗರೂಕತೆಯಿಂದ !

ಇನ್ನೂ ಮೂರು ಮೈಲು ದೂರವಿರುವಾಗ ಅದರ ಮೈಕೂದಲು ನೆಟ್ಟಗಾದವು. ಆ ದಾರಿ ನೇರವಾಗಿ ಶಿಬಿರಕ್ಕೆ ಮುಟ್ಟುತ್ತಿತ್ತು. ಅಲ್ಲಿಯೇ ಜಾನ್ ಥಾರ್ಟನ್ನನ ವಸತಿ. ಬಕ್ ಈಗ ಅವಸರ ಮಾಡಿತು. ಕಳ್ಳ ಹೆಜ್ಜೆ ಇಕ್ಕ ಹತ್ತಿತು. ಹಿಂದಿನ ಚರಿತೆ ಎಲ್ಲ ಮನಸ್ಸಿನಲ್ಲಿ ತಿರುಗುತ್ತಿತ್ತು. ತನ್ನ ಹೊಸ ಮಾರ್ಗಕ್ರಮಣದ ವರ್ಣನೆಯನ್ನು ಅದರ ಮೂಗೇ ಮಾಡುತ್ತಿತ್ತು. ಕಾಡಿನ ಶಾಂತತೆ ಅದರ ಮನೋಭಿತ್ತಿಯಲ್ಲಿ ಸ್ಫುಟವಾಗಿ ಮೂಡಿತ್ತು. ಪಕ್ಷಿಗಳ ಜೀವನ ಅದರ ಕಣ್ಕಟ್ಟಿದಂತಿತ್ತು. ಇಣಚಿಗಳು ಈಗ ಗಿಡದಲ್ಲಿ ಹುದುಗಿಕೊಂಡಿದ್ದವು. ಒಂದೇ ಮಾತ್ರ ಈಗ ಕಣ್ಣಿಗೆ ಬಿದ್ದಿತು—ಬೂದಿ ಬಣ್ಣದ್ದು; ಕಾಡಿನ ಉತ್ಸಾಹೀ ಅಂಗವಾಗಿ ಅದು ಪರಿಣಮಿಸಿತ್ತು.

ತನ್ನ ನೆರಳಿನೊಡನೆ ಬಕ್ ಹೀಗೆ ನಿರುದ್ದಿಶ್ಯವಾಗಿ ಜಾರುತ್ತಿರುವಾಗ ಅದರ ಮೂಗಿಗೆ ಏನೊ ಆಘಾತವಾದಂತಾಯಿತು. ಹಿಡಿದು ಎಳೆದು ನಿಲ್ಲಿಸಿದ

ಸಂಶಯ ಹುಟ್ಟಿತು. ಈ ನವೀನ ವಾಸನೆ ಹಿಡಿದು ಅದು ಗಿಡಗಳ ಝುಡುಪಿನಲ್ಲಿ ನುಗ್ಗಿತು. ಅಲ್ಲೊಬ್ಬ ಕಾಡು ಮನುಷ್ಯನಿದ್ದ. ಮಗ್ಗುಲಾಗಿ ಮಲಗಿದ್ದ. ಕಾಲು ಎಳೆದುಕೊಂಡು ಬಿದ್ದಲ್ಲಿಯೇ ಮರಣ ಸನ್ನಿಹಿತವಾಗಿತ್ತು. ಹೊಟ್ಟೆಯೊಳಗಿಂದ ಹಾಯ್ದು ಒಂದ ಬಾಣ ಹೊರಗೆ ಬಂದಿತ್ತು. ಒಂದೆಡೆಗೆ ಗರಿ, ಬೇರೆಡೆಗೆ ತುದಿ.

ನೂರು ಯಾರ್ಡು ಮುಂದೆ ಹೋದಾಗ, ಥಾರ್ಟನ್ ಸಾಕಿದ, ಹಿಮದ ಬಂಡಿ ಎಳೆಯುವ ನಾಯಿಗಳಲ್ಲೊಂದು ಕಂಡಿತು. ಡಾಸನ್ನಿನಲ್ಲಿ ಅವನು ಅದನ್ನು ಕೊಂಡಿದ್ದ. ಈ ನಾಯಿ ಮರಣಾಂತಿಕ ಅವಸ್ಥೆಯಲ್ಲಿದ್ದು ಚಟಪಟನೆ ಒದ್ದಾಡುತ್ತಿತ್ತು. ಬಕ್ ಅದನ್ನು ಸುತ್ತುವರಿದು ಹೆಚ್ಚು ಹೊತ್ತು ಕಳೆಯದೆ ಹಾಗೆ ಮುಂದುವರಿಯಿತು. ಶಿಬಿರದಿಂದ ಅಸಂಖ್ಯಾತ ಅಸ್ಪಷ್ಟ ಧ್ವನಿಗಳು ಕೇಳಬರುತ್ತಿದ್ದವು. ಏರಿಳಿತಗಳಿಂದೊಡಗೂಡಿದ ಶಬ್ದಸರಣಿಯದು. ಇದೆಲ್ಲ ಬಿಟ್ಟುಕೊಟ್ಟು ಮುಂದೆ ಕ್ರಮಿಸಿದಾಗ, ಹ್ಯಾನ್ಸ ಸಿಕ್ಕ. ಮುಖ ಮೇಲೆ ಮಾಡಿ ಪವಡಿಸಿದ್ದನವ. ಶರಪಂಜರದ ಮೇಲೆ ಮಲಗಿದಂತೆ ಕಂಡನವ! ಗಿಡದ ಟೊಂಗೆಗಳೊಳಗಿಂದ ಕಣ್ಣರಳಿಸಿ ನೋಡಿದ ಕ್ಷಣ ಕಂಡ ದೃಶ್ಯ ಭಯಾನಕವಾಗಿತ್ತು. ಅದರ ಕುತ್ತಿಗೆಯ, ಹೆಗಲಿನ ಮೇಲಿನ ಕೂದಲು ನಿಮಿರಿ ನಿಂತವು. ಸಿಟ್ಟಿನ ಜ್ವಾಲೆಗಳು ಅದರ ಕಣ್ಣೊಳಗಿಂದ ಹೊರಸೂಸತೊಡಗಿದವು. ತಾನು ಆವೇಶದಿಂದ ಗುರುಗುಟ್ಟಿದ್ದೇ ಅದಕ್ಕೆ ತಿಳಿಯಲಿಲ್ಲ. ಆದರೆ ರಾಕ್ಷಸೀ ಕ್ರೌರ್ಯದಿಂದ ಬೊಗಳಿತು. ಜೀವನದಲ್ಲಿ ಇದೇ ಕೊನೆಯ ಸಲ ಅದರ ಠಕ್ಕುತನ ಕೆಳಗಾಗಿ, ಮನೋವಿಕಾರ ಕೈ ಮೇಲು ಮಾಡಿದ್ದು! ತನಗಾಗಿ ಆತ್ಮಾರ್ಪಣೆ ಮಾಡಿದ ಜಾನ್ ಥಾರ್ಟನ್‌ನ ಹೃದಯವಿದಾರಕ ಪರಿಸ್ಥಿತಿ ಕಂಡು ಅದು ಹೇಗೆ ಸುಮ್ಮನಿದ್ದೀತು!

ತಾವು ಹಾಳುಗೆಡಹಿದ ಪ್ರದೇಶದಲ್ಲಿ ತಾಂಡವನೃತ್ಯ ನಡೆಸಿದ ಯೀಹಾತರು, ತಮ್ಮ ಮೇಲೆ ಅತ್ಯಾವೇಶದಿಂದ ಏರಿಬರುವ ಸಿಂಹರೂಪಿ ಪ್ರಾಣಿಯನ್ನು ಕಂಡು ಕಾಲ್ಕಿಗೆಯಲನುವಾದರು. ನಿಜಕ್ಕೂ ಇಂತಹ ಪ್ರಾಣಿ ಅವರ ಜೀವಮಾನದಲ್ಲೆಲ್ಲ ಕಣ್ಣಿಗೆ ಬಿದ್ದಿದ್ದಿಲ್ಲ. ಅದೇ ಬಕ್. ರೋಷದ ಜೀವಂತ ಬಿರುಗಾಳಿಯದು! ಇವರನ್ನೆಲ್ಲ ಕ್ಷಣಾರ್ಧದಲ್ಲಿ ಹುರಿದುಬಿಡುವೆನೆಂದು ಹಟತೊಟ್ಟ ಪ್ರಾಣಿಯದು! ಧೀರ ಎದುರಿಗಿದ್ದವನ ಮೇಲೆಯೆ ಅದು ಮೊದಲು ಅಲಕ್ಕನೆ

ಜಿಗಿಯಿತು (ಅವನೇ ಯೀಹಾತರ ಮುಂದಾಳು). ನೋಡನೋಡುವಷ್ಟ ರಲ್ಲಿಯೇ ಅವನ ಗಂಟಲು ಹರಿಯಿತು. ಮಡುವುಗಟ್ಟಿ ರಕ್ತ ಹೊರಸೂಸಿತು. ಮೊದಲಿನವನ ಗತಿ ಏನಾಯಿತೆಂಬ ಸಮಾಚಾರ ತೆಗೆದುಕೊಳ್ಳದೆ ಸರತಿಯಂತೆ ಮುಂದಿನವನ ಮೇಲೆ ಹಾರಿತು. ಅದನ್ನು ತಡೆವ ಗಂಡಸಾರು ? ಎಲ್ಲರ ಮಧ್ಯದಲ್ಲಿಯೇ ಒಳನುಗ್ಗಿತು. ಅವರು ಬಾಣದ ಮಳೆ ಕರೆದರೂ ಕಿಂಚಿತ್ತಾ ದರೂ ಲಕ್ಷಿಸದೆ ಅಖಂಡವಾಗಿ ಸುಲಿಗೆ ನಡೆಸಿತು. ಹಾಹಾಕಾರವೆದ್ದಿತು. ಎಂತಹ ಹಿಂಸೆ ! ಇದರ ರಭಸಕ್ಕೆ ಅವರೆಲ್ಲಿ ಈಡು ? ಕಾತುಜನರು ಗದ್ದಲ ದಲ್ಲಿ ಹೊಡಿದ ಬಾಣ ಅವಸರದಲ್ಲಿ ತಮ್ಮವರಿಗೇ ತಾಕಿತು. ಒಬ್ಬ ತರುಣ ಬೇಟೆಗಾರ ಅತಿ ಜಾಗರೂಕನಾಗಿ ಬಕ್ಕನೆಡೆಗೆ ಭಲ್ಲೆ ಎಸೆದ. ದುರ್ದೈವದಿಂದ ಅದು ತಮ್ಮೊಳಗಿನೊಬ್ಬನಿಗೆ ನಟ್ಟಿತು. ಹೊಟ್ಟೆಯಲ್ಲಿ ನಟ್ಟು ಅದು ಬೆನ್ನಿನಲ್ಲಿ ಪಾರಾಯಿತು. ಯೀಹಾತರು ಈಗ ಕಂಗಾಲಾದರು. ಹೌಹಾರಿಹೋದರು. ಇನ್ನುಳಿದವರ ಜೀವವಾದರೂ ಉಳಿದರೆ ಸಾಕೆಂದು ಸಬ್ಬಲ್ಲಿಪೆ ಅಡಸಿಬಿದ್ದು ದಿಕ್ಕು ಗೆಟ್ಟು ಓಡಿದರು. ಇದೇನು ರಾಕ್ಷಸನ ಕೈಗೆ ಸಿಕ್ಕುಬಿದ್ದೆವಲ್ಲಾ ಎಂದು ಗೋಳಿಟ್ಟರು.

ನಿಜಕ್ಕೂ ಬಕ್ ರಕ್ಕಸನೇ. ಓಡುವವರನ್ನು ಹಾಗೇ ಬಿಡಲಿಲ್ಲ. ಬೆನ್ನು ಹತ್ತಿತು. ಚಿಗರಿಗಳನ್ನು ಬೇಟೆಯಾಡುವಂತೆ ಅವರೊಡನೆ ಸ್ಪರ್ಧಿಸಿತು. ಗಿಡ ಗಂಟೆಗಳನ್ನು ಕೊಂಚವೂ ಲಕ್ಷಿಸಲಿಲ್ಲ. ಯೀಹಾತರ ದುರ್ದಿನವದು. ಅವರು ದಿಕ್ಕಾಪಾಲಾಗಿ ಪಲಾಯನ ಸೂತ್ರ ಪಠಿಸಿದರು. ಮುಂದೆ ಒಂದು ವಾರದ ನಂತರ ಉಳಿದವರು ಪರಸ್ಪರರನ್ನು ಕಂಡು ಮರಣಕ್ಕೆ ಗುರಿಯಾದವರ ಲೆಕ್ಕ ಮಾಡಿಕೊಂಡರು. ಬಕ್ ಮಾತ್ರ ಬೆನ್ನು ಹತ್ತಿ ಹತ್ತಿ ಬೇಸತ್ತು ಕೊನೆಗೆ ರಾವು ರಾವು ಹೊಡೆಯುವ ಶೂನ್ಯವಾದ ಶಿಬಿರಕ್ಕೆ ಬಂದಿತು. ಕಂಬಳಿ ಹೊದ್ದು ಕೊಂಡು ಮಲಗಿದಲ್ಲಿಯೇ ಪಾಪ, ಪೇಟೆ ಇಹಲೋಕ ಯಾತ್ರೆ ಮುಗಿಸಿದ್ದ. ಅಚ್ಚರಿಯೆನಿಸಿತು. ಅನಿರ್ವಚನೀಯ ವ್ಯಥೆಯೂ ಆಯಿತು. ಥಾರ್ನಟನ್ ಶತ್ರುಗಳನ್ನು ಎದುರಿಸಿದ ಬಗೆಯ ನಿದರ್ಶನ ನೆಲದ ಮೇಲೆಯೇ ಕಾಣುತ್ತಿತ್ತು. ಒಂದು ದೊಡ್ಡ ಮಡುವಿನ ಬಳಿಗೆ ಹೋಗುವಾಗೆಂದರೆ, ಬಕ್‌ನಿಗೆ ಎಲ್ಲ ಚಿಕ್ಕ ಚಿಕ್ಕ ವಿವರಗಳು ಸ್ಮೃತಿಗೆ ಬಂದವು. ಕೊನೆಯುವರೆಗೂ ವಿಶ್ವಾಸಿಯಾಗಿ ಉಳಿದ ಸ್ಕೀಟ್, ಅದೋ ಅಲ್ಲಿ—ತಲೆ, ಮುಂಗಾಲು ನೀರಿನಲ್ಲಿ ಇಳಿಬಿಟ್ಟು

ಕೊಂಡಂತೆ ಪ್ರಾಣ ನೀಗಿದೆ. ಮಡುವಿನಲ್ಲಿಯೆ ಹೊಕ್ಕು ನೋಡುವದಾದರೆ ಗೊತ್ತಾಗುವ ಸಂಗತಿಗಳೆಷ್ಟೊ ! ಅಲ್ಲೊಂದು ಪೆಟ್ಟಿಗೆ ಕಾಣುವದು. ನಿಶ್ಚಯ ವಾಗಿಯೂ ಥಾರ್ಟನ್‌ನನ್ನು ಒಳಗೆ ಇಟ್ಟಿರಬಹುದು. ನೀರು ರಾಡಿಯಾಗಿದೆ. ನೀರಂಚಿನ ವರೆಗೆ ಅವನ ಗುರುತು ಸಿಕ್ಕವೇ ವಿನಾ ಮುಂದೇನೂ ಕಾಣಲಿಲ್ಲ.

ಇಡೀ ದಿನ ಬಕ್ ಮಡುವಿನ ಬಳಿಯಲ್ಲಿ ಚಿಂತಾಕ್ರಾಂತ ಮುಖಮುದ್ರೆ ಯಲ್ಲಿ ಕುಳಿತಿತ್ತು. ಆಗೀಗ ಅಲೆದಾಡಿದರೂ ಶಿಬಿರದ ಸುತ್ತಮುತ್ತಲಷ್ಟೆ. ಚಲನವಲನೆ ನಿಲ್ಲಿಸುವ ಜೀವಂತ ವ್ಯಕ್ತಿಗಳನ್ನು ಬಂಧುಬಳಗದವರಿಂದ ಸೆಳೆ ದೊಯ್ಯುವ ಸಾವು ಇದೀಗ ಥಾರ್ಟನ್‌ನನ್ನೂ ನುಂಗಿ ಹಾಕಿದೆ. ಬಕ್‌ನ ಮನಸ್ಸಿನಲ್ಲಿ ಎಲ್ಲವೂ ಬರಿದು; ತೆರವೊ ತೆರವು ! ಆ ಶೂನ್ಯತೆ ಹೃದಯಭೇದಿ ಸುಪಂತಹದು. ಹಸಿವೆ ನೀರಡಿಕೆ ಈಗ ಗಾವುದ ಗಾವುದ ದಾಟಿ ಹೋಗಿವೆ. ಕೇವಲ ಆಹಾರದ ಆಧಾರದಿಂದ ಅದರ ಉದ್ವಿಗ್ನತೆ ಮರೆಯಾಗದು. ಒಮ್ಮೊಮ್ಮೆ ಯೀಹಾತರ ಹೆಣಗಳೂ ಅಸಂಖ್ಯಾತವಾಗಿ ನೆಲಕ್ಕುರಳಿದ್ದ ದೃಶ್ಯ ಮಿಂಚಿದಾಗ ಮತ್ತೆ ವಿಲಕ್ಷಣ ಸಮಾಧಾನ ತಲೆದೋರುತ್ತಿತ್ತು. ಕರ್ತವ್ಯ ಮಾಡಿದೆನೆಂಬ ನಸು ಅಭಿಮಾನ ಕಾಣಿಸಿಕೊಳ್ಳುತ್ತಿತ್ತು. ಆದರೆ ಅದು ಕ್ಷಣಿಕ. ಟೊಣಪೆ ಪಿಪದಂತಹ ಕಾನೂನಿನ ದಿನಮಾನಗಳಲ್ಲಿ ತನ್ನನ್ನು ಅಂಗೈ ಮೇಲೆ ಇಟ್ಟು ಸಲುಹಿದ, ಜಗತ್ತಿನಲ್ಲಿಯೇ ಅತ್ಯಂತ ಪ್ರೀತ್ಯಾಸ್ಪದವೆನಿಸಿದ ಒಂದು ವ್ಯಕ್ತಿ ಯನ್ನು ವೈಮರೆವಿನಿಂದ ಸಾಯಗೊಟ್ಟೆನಲ್ಲಾ ಎಂದು ಮಮ್ಮಲ ಮರುಗಿತು. ಎಲ್ಲ ಕಳೇಬರಗಳನ್ನು ಮೂಸಿ ನೋಡತೊಡಗಿತು—ಕೇವಲ ಕೌತುಕದ ಸರಣಿಯಲ್ಲಿ. ಅವರು ತೀರ ಸುಲಭವಾಗಿ ಸತ್ತುಹೋಗಿದ್ದರು. ಆ ಜನರಿಗಿಂತ ಹಸ್ಕಿ ನಾಯಿಗಳನ್ನು ಕೊಲ್ಲುವದು ದುಸ್ತರವಾಗಿತ್ತು. ಅದಾದರೂ ಹೇಗೆ ಸತ್ತರೋ ! ಎಲ್ಲವೂ ಬಕ್‌ಸಿಗೆ ಗುಂಭವೆನಿಸಿತು. ಬಾಣ, ಭಲ್ಲೆ ಟೊಣಪೆಗಳ ಮುಂದೆ ಅವುಗಳ ಆಟ ನಡೆದಿರಲಿಕ್ಕಿಲ್ಲ. ಇರಲಿ. ಇನ್ನು ಮುಂದೆ ತಾನಾರಿಗೂ ಸೊಪ್ಪು ಹಾಕಕೂಡದು; ಭಲ್ಲೆ ಬಾಣಗಳಿದ್ದಾಗಿನ ಮಾತು ಬೇರೆ—ಎಂದು ಬಕ್ ಮನದಲ್ಲಿಯೇ ಸಂಕಲ್ಪಿಸಿತು.

ಇರುಳು ಬಂದಿತು. ಗಿಡಗಳ ಟೊಂಗೆಗಳಲ್ಲಿ ಪೂರ್ಣ ಚಂದ್ರನ ಬಿಂಬ ಕಾಣಹತ್ತಿತು. ಇಡೀ ದಿನವೆಲ್ಲ ಸ್ಮಶಾನ ಶಾಂತಿಯಲ್ಲಿ ಮಿಂದ ಪ್ರದೇಶಕ್ಕೆ ಈಗ ಬೆಳದಿಂಗಳು ಬಂದಿತು. ರಾತ್ರಿ ಹೆಚ್ಚಿದಂತೆ ಬಕ್‌ನ ಚಿಂತೆ ಹೆಚ್ಚಿತು.

ವಿಚಾರ ಮುತ್ತಿತು. ಯೀಹಾತರು ಕಾಲ್ಪಿಗೆದ ಮೇಲೆ ಅರಣ್ಯದಲ್ಲಿ ಹೊಸ ಜೀವನ ಅಡಿ ಇಟ್ಟಂತೆ ಅದಕ್ಕೆ ತೋರಿತು. ಮತ್ತೆ ಮಡುವಿನ ಬಳಿಗೆ ಹೋಯಿತು. ಒಂಟಿಗನಾಗಿ ಕುಳಿತಿತು. ಎದ್ದು ನಿಂತು ವಿವಿಧ ಸ್ವನ ಆಲಿಸಿತು. ಮೂಸಿನೋಡಿತು. ದೂರಿನಿಂದ, ಅತಿ ದೂರಿನಿಂದ ಪ್ರಾಣಿಗಳ ಕೂಗು ಕೇಳ ಬರುತ್ತಿದ್ದವು. ಮೊದಲು ಅಸ್ಪಷ್ಟವೆನಿಸಿದವು ಈಗ ತೀರ ಸಮೀಪಕ್ಕೆ ಬಂದವು.

ಕ್ಷಣ ಗತಿಸಿದಂತೆ ಧ್ವನಿ ದೀರ್ಘವಾಗುತ್ತ ನಡೆಯಿತು. ಹೊಸ ಸೃಷ್ಟಿ ಯಲ್ಲಿ ಕೇಳಿದ ಇನ್ನೊಂದು ಧ್ವನಿಯೆಂದು ಬಕ್‌ನ ಮನಸ್ಸಿನಲ್ಲಿ ನಿರಂತರವಾಗಿ ನೆಲೆಸಿತು. ಸ್ವಲ್ಪ ಮುಂದೆ ಕ್ರಮಿಸಿ, ಬಟ್ಟೆಬಯಲಿನ ಮಧ್ಯೆ ನಿಂತು ಕೊಂಡು ಅದು ಕಿವಿಗೊಟ್ಟು ಲಾಲಿಸಿತು. ಅದೇ ಧ್ವನಿಯದು. ಹಿಂದೆಷ್ಟೋ ದಿನದಿಂದ ಕೇಳಿದಂತಹದು. ಅದು ಬಕ್‌ನನ್ನು ಮುಗ್ಧವಾಗಿ ಮಾಡಿ ತನ್ನೆಡೆಗೆ ವಿಲಕ್ಷಣ ಶಕ್ತಿಯಿಂದ ಸೆಳೆಯತೊಡಗಿತು. ಒಂದೇ ಪ್ರಾಣಿಯ ಧ್ವನಿಯಲ್ಲ. ಮೃಗಸಂಕುಲದ ಮೋಹಕ ನಿನಾದ. ಮೊದಲಿನಿಂದಲೂ ನಿರ್ಧರಿಸಿ ನಡೆ ದಂತೆ ಬಕ್‌ನಿಗೆ ಈಗಾದರೂ ಆ ಕರೆಯನ್ನು ಮನ್ನಿಸದಿರಲಾಗಲಿಕ್ಕಿಲ್ಲ. ಪಾಪ! ಜಾನ್ ಥಾರ್ಟನ್ ಸತ್ತುಹೋಗಿದ್ದ. ಜೀವನದ ವಾತ್ಸಲ್ಯದ ಕೊನೆಯ ಬಂಧನ ಕಳಚಿಬಿದ್ದಿತು. ಇನ್ನಾರ ವಶದಲ್ಲಿರುವದು? ಯಾರ ಹಂಗೇನು? ಬೇರೆ ಯಾರು ತನ್ನನ್ನು ಪ್ರೀತಿಸಬಲ್ಲರು? ಯಾವ ಮನುಷ್ಯನ ಸಹವಾಸದ ಸುಖವೂ ಈಗ ಉಳಿಯಲಿಲ್ಲ!

ಸತ್ತವರ ಮಾಂಸ ತಿನ್ನಲೆಂದು ಆಶಿಸಿ, ಯೀಹಾತರು ಮಡಿದುಬಿದ್ದ ಕೊಳ್ಳದ ಪ್ರದೇಶಕ್ಕೆ ತೋಳಗಳ ಹಿಂಡು ಸದ್ದು ಮಾಡುತ್ತ, ಬಿದಿರು ಮೆಳೆಗಳೊಳ ಗಿಂದ ಹಾಯ್ದು ಅಲ್ಲಲ್ಲಿಯ ಝರಿಗಳನ್ನು ದಾಟಬಂದಿತು. ಬೆಳ್ದಿಂಗಳು ತುಂಬ ಹರಡಿದಲ್ಲಿ ಬೆಳ್ಳಿಯ ಮಹಾಪೂರವೇ ಬಂದಂತೆನಿಸುತ್ತಿತ್ತು. ನಡುವೆ ಬಕ್ ನಿಂತಿತ್ತು. ಶಿಲಾಪ್ರತಿಮೆ! ಕೊಂಚವೂ ಅಲುಗಾಟವಿಲ್ಲ. ಆ ಹಿಂಡಿನ ನಿರೀಕ್ಷಣೆಯಲ್ಲಿಯೇ ಅದಿತ್ತು. ತೋಳಗಳು ಇದರ ಭವ್ಯ ಆಕಾರ ನೋಡಿ ಮೊದಲು ಹೆದರಿದವು. ಆದರೆ ಮರುಕ್ಷಣ ಅವುಗಳಲ್ಲಿಯದೊಂದು ದಿಟ್ಟ ಪ್ರಾಣಿ ನೇರವಾಗಿ ಬಕ್‌ನೆಡೆಗೆ ಹಾರಿತು. ಬಕ್ ಮಿಂಚಿನಂತೆ ಅದನ್ನು ಎದುರಿಸಿ ನೆಲಕ್ಕೆ ಕೆಡವಿತು. ನರಿ ಒಂದೇ ಸವನೆ ನರಳುತ್ತ ಗೋಳಾಡಿ

ಹೊರಳಾಡಿತು. ಮತ್ತೆ ಮೂರು ಹಾಗೆ ಏರಿಬಂದವು. ಒಂದರ ನಂತರ ಒಂದು ಬಂದ ಹಾಗೆ ಹಿಂತಿರುಗಬೇಕಾಯಿತು—ಪರಾಜಿತವಾಗಿ. ಗಂಟಲು, ಹೆಗಲಿನಿಂದ ಅವಕ್ಕೆ ರಕ್ತಸ್ರಾವ ನಡೆದಿತ್ತು.

ಇಡೀ ಹಿಂಡಿನಲ್ಲಿ ಹಾಹಾಕಾರ ಹುಟ್ಟಿಸಲು ಇದೊಂದು ಸನ್ನಿವೇಶ ಸಾಕು. ತೋಳಗಳೆಲ್ಲ ಒಟ್ಟುಗೂಡಿ ಮಸಲತ್ತು ಹೂಡಿದವು. ಈ ಬಕ್‌ನನ್ನು ಹಣ್ಣು ಮಾಡುವದೆಂತು ಎಂಬುದೇ ಪ್ರಶ್ನೆ ಅವಕ್ಕೆ. ಬಕ್‌ನಿಗೆ ಅವರ ಚಪಲತನವೇ ಮಹಾಸ್ತ್ರವಾಗಿತ್ತು. ಒಂದು ಕಾಲಮೇಲೆಯೆ ತಿರುಗುವ ಕಲೆ ಸಾಧಿಸಿಕೊಂಡು ಬೇಕಾದ ದಿಕ್ಕಿನಲ್ಲಿ ನಿಂತು ಎಲ್ಲವರನ್ನು ಸರಿಯಾಗಿ ಎದುರಿಸುವ ಹತೋಟಿ ಅದಕ್ಕೆ ಸಹಜವಾಗಿ ವಶವಾಗಿತ್ತು. ಯಾವ ದಿಕ್ಕಿನಿಂದ ಎದುರಿಸಿದರೂ ಅವರ ಪರಿಸ್ಥಿತಿ ಭದ್ರವಾಗಿರುತ್ತಿತ್ತು. ಅಂತಹ ರಕ್ಷಣೆಯ ಹದ; ಗತ್ತುಗಾರಿಕೆ! ಹಿಂದಿನಿಂದ ಆ ಪ್ರಾಣಿಗಳು ಬಂದಾವೆಂದು ಅದು ಕೂಡಲೆ ತಿರುಗಿ ನಿಂತು ಹಿಂದೆ ಸರಿಯುತ್ತ ಕೊಳವಲ್ಲಿಯೂ ಜಾರಿ ದಿನ್ನೆಯನ್ನೇರುತ್ತಿತ್ತು. ಆ ಮೇಲೆ ಎಲ್ಲಿಯ ಹೆದರಿಕೆ? ಕಣಿಯಲ್ಲಿ ಕೆಲಸ ಮಾಡುವ ಜನರು ಕಾಟಕೋನಾಕೃತಿಯ ದಾರಿ ಮಾಡಿದಂತೆ ಬಕ್ ಸಹ ತನ್ನ ಯುದ್ಧದ ಮಾರ್ಗವನ್ನು ಅದೇ ಬಗೆಯಾಗಿ ಸಂಯೋಜಿಸಿತ್ತು. ಮೂರು ದಿಕ್ಕಿನಲ್ಲಿ ಕಾವಲು ಮಾಡುತ್ತಿತ್ತು. ಇನ್ನುಳಿದ ದಿಕ್ಕು ಹೋರಾಟದ ಸ್ಥಳವೆಂದು ಮೀಸಲು.

ಈ ಬಕ್‌ನ ಯುದ್ಧದ ವಿಧಾನ ಕಂಡು ಅರ್ಧ ತಾಸಿನಲ್ಲಿ ತೋಳಗಳೆಲ್ಲ ಪರಾಜಯ ಹೊಂದಿ ಶರಣುಬಂದವು. ಎಲ್ಲ ತೋಳಗಳ ನಾಲಿಗೆ ಜೋತುಬಿದ್ದಿದ್ದವು. ಅವುಗಳ ಕ್ರೂರ ಹಲ್ಲುಗಳು ಬೆಳ್ದಿಂಗಳಿನಲ್ಲಿ ಲಕಲಕಿಸುತ್ತಿದ್ದವು. ಕೆಲವು ತಲೆ ಎತ್ತಿಕೊಂಡು ಮಲಗಿದವು. ಕಿವಿ ಮುಂದೆ ಬಂದಿದ್ದವು. ಬೇರೆ ಹಲವು—ಕಾಲ ಮೇಲೆ ಭಾರ ಹಾಕಿ ಬಕ್‌ನನ್ನು ನಿರೀಕ್ಷಿಸುತ್ತಿದ್ದವು. ಇನ್ನೂ ಕೆಲವು ಲೊಚಲೊಚ ನೀರು ಕುಡಿಯುತ್ತಿದ್ದವು—ಹೊಂಡದಲ್ಲಿ. ಒಂದು ತೋಳ ಮಾತ್ರ ಬಹಳ ಬೆಳ್ಳಗೆ ಹಾಗೂ ಬಡಕವಾಗಿದ್ದದ್ದು, ಮೆಲ್ಲನೆ ಸ್ನೇಹ ಭಾವದಿಂದ ಜಾಗ್ರತೆಯಾಗಿ ಮುಂದು ಬಂದಿತು—ಬಕ್‌ನೆಡೆಗೆ. ಇಡೀ ಹಗಲು, ಇಡೀ ಇರುಳು ತಾನು ಇವುಗಳೊಡನೆ ಒಂದು ಸಲ ಅಲೆದಾಡಿದ ಹಿಂದಿನ ನೆನಪು ಅದಕ್ಕೆ ಮರುಕಳಿಸಿತು. ಅವೆರಡೂ ಸ್ತಬ್ಧವಾಗಿಯೇ ಇದ್ದು ಒಂದನ್ನೊಂದು ಮುಟ್ಟಿನೋಡಿ ಪ್ರೀತಿ ತೋರಿಸಿದವು.

ಒಂದು ಮುದಿ ತೋಳ—ಮೈಮೇಲೆಲ್ಲ ಗಾಯದ ಗುರುತುಗಳಿದ್ದುದು ಮುಂದೆ ಬಂದಿತು. ಬಕ್ ತುಟಿ ಕಚ್ಚಿ ಜಗಳದ ಹಿನ್ನೆಲೆಯಾಗಿ ಗುರುಗುಟ್ಟಿತು. ಆದರೆ ಮರುಕ್ಷಣ ಅವರ ಮೂಗು ಮೂಸಿನೋಡಿತು. ಆಗ ಆ ತೋಳ ಕೆಳಗೆ ಕುಳಿತು ದೀರ್ಘವಾಗಿ ಒದರಿತು. ಉಳಿದುವೂ ಕೆಳಗೆ ಕುಳಿತು ಹಾಗೆ ತಮ್ಮ ರೀತಿಯಲ್ಲಿ ಕೂಗಿದವು. ಚಾಚೂ ತಪ್ಪದೆ ಆ ಸಂಮಿಶ್ರ ಧ್ವನಿಯಲ್ಲಿ ಬಕ್ ತನ್ನ ಧ್ವನಿಯನ್ನೂ ಕೂಡಿಸಿತು. ಇದಾದೊಡನೆ ತನ್ನ ಕಾಟಕೋನ ಪ್ರದೇಶ ಬಿಟ್ಟುಕೊಟ್ಟು ಹೊಸ ಹಿಂಡಿಗೆ ಹೋಗಿ ಕೂಡಿಕೊಂಡಿತು. ಅವರ ಸುತ್ತು ಮುತ್ತಲೆಲ್ಲ ತೋಳಗಳು–ಎಲ್ಲವೂ ಅರ್ಧಮರ್ಧ ಕಾಡು–ಅರ್ಧಮರ್ಧ ಸ್ನೇಹ ಭಾವದಿಂದ ಅದನ್ನು ಸ್ವಾಗತಿಸಿದವು. ಮುಂದಾಳುಗಳು ತಮ್ಮ ಓಂಟಿನ ಧ್ವನಿ ಹಿಡಿದು ಕೂಗಿ ಕಾಡಿನಲ್ಲಿ ಧುಮುಕಿದವು. ಉಳಿದುವು ಓಂಬಾಲಿಸಿ ದವು—ಹಾಗೇ ಏಕಮುಖವಾಗಿ ಗರ್ಜಿಸುತ್ತ ! ಬಕ್ ಸರಿಸರಿಯಾಗಿ ಅವು ಗಳ ಬದಿಯಲ್ಲಿಯೇ ಕಾಡಿನ ಸಹೋದರನಂತೆ ಸಾಗಿತು.

ಇಲ್ಲಿಗೆ ಬಕ್‌ನ ಚರಿತೆ ಮುಗಿಯಬೇಕು. ಬಿದಿರು ಮೆಳೆಗಳಲ್ಲಿಯ ತೋಳಗಳ ಹಿಂಡಿನಲ್ಲಿ ಅಪೂರ್ವ ಪರಿವರ್ತನೆಯಾದುದು ಯೀಹಾತರ ಲಕ್ಷ್ಯಕ್ಕೆ ಬಾರದೆ ಉಳಿಯಲಿಲ್ಲ. ತಲೆಯ ಮೇಲೆ ಕಂದಿ ಬಣ್ಣವಿದ್ದ, ಎದೆಯ ಮೇಲೆ ಶುಭ್ರ ಕಲೆಗಳಿದ್ದ ತೋಳಗಳು ಅಲ್ಲಲ್ಲಿ ಅಡ್ಡಾಡುತ್ತಲೇ ಇದ್ದವು. ಇದ ಕ್ಕಿಂತಲೂ ಹೆಚ್ಚಿನ ಮಾತೆಂದರೆ, ಬಕ್‌ನನ್ನು ಕಂಡರೆ ಅವರು ಅಂಜಿ ಸಾಯು ತ್ತಿದ್ದರು. ಎಂತಹ ರಾಕ್ಷಸೀ ರೂಪ ಆದರದೆಂದು ಹೌಹಾರಿಹೋಗಿದ್ದರು. ಚಳಿಗಾಲದ ಕೊರೆತ ಇನ್ನೂ ಪ್ರಬಲವಿರುವಾಗ ಅದು ಗಪ್ಪುಗಾದಿರುಳಲ್ಲಿ ಕಳ್ಳ ಹೆಜ್ಜೆ ಇಡುತ್ತ ಬಂದು ಅವರ ಬಲೆಗಳನ್ನು ಕದಿಯುತ್ತಿತ್ತು. ನಾಯಿ ಗಳನ್ನು ತಿನ್ನುತ್ತಿತ್ತು. ಅವರಲ್ಲಿಯ ಅತಿ ಶೂರ ಬೇಟೆಗಾರರ ಇತಿಶ್ರೀಯೂ ಆಗುತ್ತಿತ್ತು.

ಅದರ ಕತೆ ಇನ್ನೂ ಭಯಾನಕವಾಗಿತ್ತೆಂಬಲ್ಲಿ ಸಂದೇಹವಿಲ್ಲ. ಬೇಟೆ ಗೆಂದು ಹೋದ ಬೇಟೆಗಾರರು ಈ ತೋಳಗಳ ಹಿಂಡಿನ ಕೈಗೆ ಸಿಕ್ಕು ಮನೆ ಯನ್ನೇ ಕಾಣುತ್ತಿದ್ದಿಲ್ಲ. ಏಕೆ ಹೀಗಾಗಿರಬಹುದೆಂದು ಹುಡುಕಾಡತೊಡಗಿ ದರೆ ನೆಲದ ಮೇಲೆ ತೋಳಗಳ ಹೆಜ್ಜೆ. ಬಳಿಯಲ್ಲಿ ನಾಯಿಯ ಪಾದಗಳ ಗುರುತು ! ಯಾವ ಕೊಳ್ಳದಲ್ಲಿ ಹೋಗಿ ನೆಲೆಸಬೇಕೆಂದರೂ ಅವರಿಗೆ ಸುರಕ್ಷಿತತೆ

ಉಳಿಯಲಿಲ್ಲ. ತಾವಿದ್ದ ಕೊಳ್ಳದ ಬಳಿಯಲ್ಲಿ ತೋಳ ನೆಲೆಸಿದವೆಂದು ಸುದ್ದಿ ಬಂದರೆ ಸಾಕು, ದಾವಾನಲ ಕಂಡಂತೆ ಅವರು ಚಿಂತೆಗೊಳಗಾಗುತ್ತಿದ್ದರು.

ಆದರೆ ಯೀಹಾತರಿಗೆ ಗೊತ್ತಿಲ್ಲದಂತೆ ಒಂದು ಪ್ರಾಣಿ ಮಾತ್ರ ಬೇಸಿಗೆ ಕಾಲದಲ್ಲಿ ಅಲ್ಲಿಗೆ ಬರುತ್ತಿತ್ತು. ಅದೊಂದು ತೋಳನ ಆವರಣವಿದ್ದುದು; ಆದರೆ ತೋಳವಲ್ಲ. ಅದು ಹಸಿರು ಮುರಿಯುವ ಬಿದಿರು ಮೆಳೆ ದಾಟಿ ಬಯಲು ಪ್ರದೇಶದಲ್ಲಿ ಅಡಿ ಇಡುತ್ತಿತ್ತು. ಅಲ್ಲಿ ಗಿಡದ ಝುಡುಪು. ಬಳಿಯಲ್ಲಿಯೇ ಸಿಡಿದಾಗಿ ಹುಲ್ಲು ಬೆಳೆದಿರುತ್ತಿತ್ತು. ಕಾಯಿಸಲ್ಲಿ ಸಹ ಬೆಳಿಸಿದ್ದರು. ಸೂರ್ಯ ರಶ್ಮಿಗೆ ಅವು ತಾಕದಂತೆ ಮುಚ್ಚಿ ಹೋಗಿರುತ್ತಿದ್ದವು. ಆ ಸ್ಥಳ ಬಿಟ್ಟು ಕೊಟ್ಟು ಹೋಗುವಾಗ ದೀರ್ಘವಾದ ಧ್ವನಿಗೈಯ್ಯುತ್ತಿತ್ತು.

ಆದರೆ ಅದು ಯಾವಾಗಲೂ ಏಕಾಂಗಿಯಲ್ಲ. ಚಳಿಗಾಲದ ಇರುಳು ಗಳಲ್ಲಿ ತೋಳಗಳು ಆಹಾರಕ್ಕಾಗಿ ಕೆಳಗಿನ ಕೊಳ್ಳಗಳಲ್ಲಿ ಹೊರಟಾಗ, ಮಸಕು ಮಸಕಾದ ಬೆಳ್ದಿಂಗಳಲ್ಲಿ ಅದು ಹಿಂಡಿನ ಮುಂದೆಯೇ ನಡೆದದ್ದು ಆಗಾಗ ಕಂಡುಬರುತ್ತಿತ್ತು. ನವೀನ ಪ್ರಪಂಚದ ಸಮ್ಮಿಶ್ರ ಧ್ವನಿಯಲ್ಲಿ ಅದು ದನಿ ಗೂಡಿಸಿ ಘಂಗನೆ ನೆಗೆಯುತ್ತ ಹಿಂಡಿನೊಡನೆ ಉತ್ಸಾಹದಿಂದ ಸಾಗಿರುತ್ತಿತ್ತು !



# ಕೆಲವು ಪ್ರಕಟನೆಗಳು

## ❋ ಕಾದಂಬರಿಗಳು

| | | | |
|---|---|---|---|
| ೧ | ದೀಪನಿರ್ವಾಣ | ಕೊಟ್ಟೂರಗಿ ರಾಮಚಂದ್ರ | ೧-೫೦ |
| ೨ | ಕೈಮೂಂಸ | ಜನಾರ್ದನ ಗುರ್ಕಾರ್ | ೧-೫೦ |
| ೩ | ರಕ್ತದ ರೂಪಾಯಿ | ಸೇವ ನಮಿರಾಜ ಮಲ್ಲ | ೧-೫೦ |
| ೪ | ಪರಿಹಾರ | ದ. ಬಾ. ಕುಲಕರ್ಣಿ | ೭-೦೦ |

## ❋ ಕಥಾಸಂಗ್ರಹಗಳು

| | | | |
|---|---|---|---|
| ೧ | ತೇಲಿಹೋದ ಮೋಡ | ಗೀತಾ ಕುಲಕರ್ಣಿ | ೧-೫೦ |
| ೨ | ಕಪ್ಪುಹುಡುಗಿ | ದ. ಬಾ. ಕುಲಕರ್ಣಿ | ೦-೭೫ |
| ೩ | ಚೈತ್ರ ಪಲ್ಲವ | ಕೊಟ್ಟೂರಗಿ ರಾಮಚಂದ್ರ | ೧-೨೭ |
| ೪ | ಸಂಪಿಗೆಯ ಹೂ | ವ್ಯಾಸರಾಯ ಬಲ್ಲಾಳ | ೧-೫೦ |
| ೫ | ಮುದ್ದಿನ ಕಣಿ (ಚೆಕೊವ್) | ಅನುವಾದ : ಚುಳಕಿ | ೧-೦೦ |
| ೬ | ದೋರಾ ಮತ್ತು ಇತರ ಕಥೆಗಳು | ,, ,, | ೧-೦೦ |

## ❋ ನಾಟಕಗಳು

| | | | |
|---|---|---|---|
| ೧ | ಜಂಬದ ಜಾನಕಿ | ಶಿವರಾಮ ಕಾರಂತ | ೧-೭೫ |
| ೨ | ಅಶ್ವಮೇಧ | ಶ್ರೀರಂಗ | ೧-೫೦ |
| ೩ | ಪ್ರಪಂಚ ಪಾಣಿಪತ್ತು | ,, | ೧-೫೦ |
| ೪ | ಧನಂಜಯ | ರಂ. ಶ್ರೀ. ಮುಗಳಿ | ೦-೭೫ |

## ❋ ಇತರ

| | | | |
|---|---|---|---|
| ೧ | ಹಕ್ಕಿನೋಟ (ವ್ಯಕ್ತಿ ಚಿತ್ರಗಳು) | ದ. ಬಾ. ಕುಲಕರ್ಣಿ | ೧-೦೦ |
| ೨ | ಅರಿಕೇಸರಿ (ಕಾವ್ಯ) | ಬಿ. ಕೃಷ್ಣಭಟ್ಟ | ೧-೦೦ |

**ಈ ಪ್ರಕಟನೆಗಳ ಉತ್ತಮ ಬೈಂಡಿನ ಪ್ರತಿಗಳೂ ಇವೆ.**

**ಲಲಿತ ಸಾಹಿತ್ಯಮಾಲೆ, ಧಾರವಾಡ**

**ದಕ್ಷಿಣ ಭಾಷಾ ಪುಸ್ತಕ ಸಂಸ್ಥೆಯ ಸಹಕಾರದಿಂದ ಪ್ರಕಟಿತ**

---

ನಾಯಿ ನಂಬುಗೆಯ ಪ್ರಾಣಿ. ನಾಯಿಯನ್ನು ಕಂಡು ಪ್ರೀತಿ ತೋರಿಸದ ಜನ ಅತ್ಯಂತ ವಿರಳ. ನಾಯಿಗಳಲ್ಲಿ ಅಸಂಖ್ಯಾತ ತಳಿಗಳಿವೆ. ಕೆಲವು ಜಾತಿಯ ನಾಯಿಗಳು ಬುದ್ಧಿಯ ಚುರುಕುತನಕ್ಕೆ ಹೆಸರಾಗಿವೆ. ನೀವೀಗ ಓದುತ್ತಿರುವುದು ಇಂಥ ಒಂದು ವಿಖ್ಯಾತ ಜಾತಿನಾಯಿಯ ಕಥೆ. ಜಾಕ್ ಲಂಡನ್ ನಾಯಿಗಳೊಡನಾಟದಿಂದ ಪಡೆದ ಸ್ವಾನುಭವದಿಂದಲೇ ಈ ಕಥೆಯನ್ನು ರಚಿಸಿದ್ದಾರೆ.

—

